2. The Operational Modalities for implementation of this scheme will be as per the Government Order read at (1) above.

3. An amount of Rs. 34.57 lakhs (Rupees Thirty Four Lakhs and Fifty Seven Thousand Only) is hereby released to the Director of Horticulture towards the State share under the Head of Account 2401-00-108-2-35-100 (Financial Assistance/Relief)

4. The Director of Horticulture shall confirm that Coconut Development Board share and Farmers share is collected first before releasing the State Share. Also about the balance and utilization of State share released during 2009-10.

5. This Order is issued with the concurrence of Internal Financial Advisor vide Note No : ತೋಇ 29 ಆಂಆಸ 2010 dated 09-08-2010.

By Order and in the name of the Governor of Karnataka

**S.RAJU**

P.R. No. 2201

Under Secretary to Government,
Horticulture Department

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ** : ಶ್ರೀ ಎನ್.ಆರ್. ನಾಗರಾಜು, ಕೆಎಎಸ್(ಕಿರಿಯ ಶ್ರೇಣಿ), ವಿಶೇಷ ಭೂ ಸ್ವಾಧೀನಾಧಿಕಾರಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು ಇವರ ವಿರುದ್ಧ ಲಂಚ ನಿರೋಧ ಕಾಯ್ದೆ, 1988 ರಡಿ ದಾಖಲಾದ ಪ್ರಕರಣ ಮತ್ತು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ :** ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ : 03–07–10ರ ಪತ್ರ ಸಂಖ್ಯೆ : Lok/INV(G)/City/Crime-24/2010.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಶ್ರೀ ಎನ್.ಆರ್. ನಾಗರಾಜು, ವಿಶೇಷ ಭೂ ಸ್ವಾಧೀನಾಧಿಕಾರಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು ರವರನ್ನು ಕೆಳಕಂಡ ಪ್ರಕರಣದಲ್ಲಿ ವಿವರಿಸಿರುವಂತೆ ಇವರ ವಿರುದ್ಧದ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುವ ಕಾರಣ, ಇವರು ತಮ್ಮ ಸ್ಥಾನದಲ್ಲಿಯೇ ಮುಂದುವರಿದರೆ ತನಿಖೆಯ ಹಾದಿಯನ್ನು ತಪ್ಪಿಸುವ ಮತ್ತು ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಅವಕಾಶಗಳಿರುವುದರಿಂದ ಇವರನ್ನು ಸರ್ಕಾರಿ ಸೇವೆಯಿಂದ ತಕ್ಷಣದಿಂದಲೇ ಅಮಾನತ್ತಿನಲ್ಲಿಡಲು ಮತ್ತು ಇವರ ಲೀನ್ (ಸ್ಥಾನ) ಅನ್ನು ಬೇರೆ ಕಡೆಗೆ ವರ್ಗಾಯಿಸಲು ಶಿಫಾರಸ್ಸು ಮಾಡುತ್ತಾ, ತಮ್ಮ ವರದಿಯೊಂದಿಗೆ ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ ಮತ್ತು ಟ್ರ್ಯಾಪ್ ಪಂಚನಾಮೆಗಳನ್ನು ಲಗತ್ತಿಸಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಶ್ರೀಮತಿ ಕಮಲ ಎಂಬುವರ ಹೆಸರಿನಲ್ಲಿ ಆಸ್ತಿ ಸಂಖ್ಯೆ : 28, 1 ಮತ್ತು 2ನೇ ಮುಖ್ಯ ರಸ್ತೆ, ಕೆಐಎಡಿಬಿ ಕಾರ್ಡ್ ರಸ್ತೆ, ಪೀಣ್ಯ 1ನೇ ಹಂತ, ಬೆಂಗಳೂರು ಇಲ್ಲಿನ Godown shed ಅನ್ನು ಮೆಟ್ರೋ ಯೋಜನೆಗಾಗಿ KIADB ಸಂಸ್ಥೆಯು 2009ರಲ್ಲಿ ಸ್ವಾಧೀನಪಡಿಸಿಕೊಂಡಿದ್ದು, ರೂ. 63.00 ಲಕ್ಷಗಳ ಪರಿಹಾರವನ್ನು ನೀಡಿರುತ್ತದೆ. ಹೆಚ್ಚು ಪರಿಹಾರ ಕೋರಿ ಭೂ ಮಾಲೀಕರು ಸಲ್ಲಿಸಿದ ಅರ್ಜಿಯನ್ನು ಉಚ್ಚ ನ್ಯಾಯಾಲಯವು ಮಾನ್ಯ ಮಾಡಿ, ಭೂ ಮಾಲೀಕರು ಕೋರಿರುವಂತೆ ಪರಿಹಾರ ಹಣವನ್ನು ಅವಾರ್ಡ್ ಮಾಡಿ ನೀಡುವಂತೆ ಆದೇಶಿಸಿರುತ್ತದೆ. ಈ ಕೋರ್ಟು, ಕಛೇರಿಯ ವ್ಯವಹಾರಗಳನ್ನು ಶ್ರೀಮತಿ ಕಮಲ ರವರ ಸಹೋದರನಾದ ಶ್ರೀ ಎ. ರುಕ್ಮಾಂಗದ ರವರು ನಿರ್ವಹಿಸುತ್ತಿದ್ದು, ಪರಿಹಾರ ಮೊತ್ತದ TDS (Tax Deducted at Source) ಸರ್ಟಿಫಿಕೇಟನ್ನು ಪಡೆಯಲು ಶ್ರೀ ಎನ್.ಆರ್. ನಾಗರಾಜು, ವಿಶೇಷ ಭೂ ಸ್ವಾಧೀನಾಧಿಕಾರಿ, ಕೆಐಎಡಿಬಿ, ಗಾಂಧಿನಗರ, ಬೆಂಗಳೂರು ಮತ್ತು ಶ್ರೀ ನಾಗಭೂಷಣ, ಪ್ರಥಮ ದರ್ಜೆ ಸಹಾಯಕರು ಇವರುಗಳನ್ನು ಭೇಟಿ ಮಾಡಿದಾಗ, ಈ ಸರ್ಟಿಫಿಕೇಟನ್ನು ನೀಡಬೇಕಾದಲ್ಲಿ, ಒಂದು ಲಕ್ಷ ರೂಪಾಯಿಗಳ ಲಂಚದ ಹಣವನ್ನು ನೀಡುವಂತೆ ಇವರುಗಳು ಶ್ರೀ ರುಕ್ಮಾಂಗದ ರವರನ್ನು ಕೇಳಿರುತ್ತಾರೆ. ಲಂಚದ ಹಣವನ್ನು ನೀಡಲು ಇಷ್ಟವಿಲ್ಲದ ಶ್ರೀ ರುಕ್ಮಾಂಗದ ರವರು ದಿನಾಂಕ : 28–06–10 ರಂದು ಬೆಂಗಳೂರು ನಗರ ಲೋಕಾಯುಕ್ತ ಪೊಲೀಸು ಠಾಣೆಗೆ ನೀಡಿದ ಲಿಖಿತ ದೂರು ಆಧರಿಸಿ, ಶ್ರೀ ನಾಗಭೂಷಣ ರವರ ವಿರುದ್ಧ ಲಂಚ ನಿರೋಧ ಕಾಯ್ದೆ, 1988 ರ ಕಲಂ 7, 13 (1) (ಜ) ಸಹವಾಚನ ಕಲಂ 13(2)ರಡಿ ಮೊಕದ್ದಮೆ ಸಂಖ್ಯೆ : 24/2010 ರಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು ಕರ್ನಾಟಕ ಲೋಕಾಯುಕ್ತ ಪೊಲೀಸರು ತನಿಖೆ ಕೈಗೊಂಡಿರುತ್ತಾರೆ. ಪ್ರಾಥಮಿಕ ಪ್ರಕ್ರಿಯೆಗಳನ್ನು ಕೈಗೊಂಡ ನಂತರ, ತನಿಖಾಧಿಕಾರಿ ಹಾಗೂ ಪೊಲೀಸ್ ಇನ್ಸ್‌ಪೆಕ್ಟರಾದ ಶ್ರೀ ಲಕ್ಷ್ಮೀನಾರಾಯಣ ರವರು ತಮ್ಮ ಸಿಬ್ಬಂದಿ ಹಾಗೂ ಪಂಚ ಸಾಕ್ಷಿಗಳ ಸಮ್ಮುಖದಲ್ಲಿ ದಿನಾಂಕ : 28–06–10 ರಂದು ವಿಶೇಷ ಭೂ ಸ್ವಾಧೀನಾಧಿಕಾರಿಗಳು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಗಾಂಧಿನಗರ, ಬೆಂಗಳೂರು ಇಲ್ಲಿ ನಡೆದ ಟ್ರ್ಯಾಪ್ ಕಾರ್ಯಾಚರಣೆಯಲ್ಲಿ ಶ್ರೀ ನಾಗಭೂಷಣ್ ರವರು ಫಿರ್ಯಾದುದಾರರಾದ ಶ್ರೀ ರುಕ್ಮಾಂಗದ ರವರಿಂದ ರೂ. 1.00 ಲಕ್ಷ ಲಂಚದ ಹಣವನ್ನು ಸ್ವೀಕರಿಸುತ್ತಿದ್ದಾಗ, ಲೋಕಾಯುಕ್ತ ಪೊಲೀಸರು ಬೀಸಿದ ಬಲೆಗೆ ಸಿಕ್ಕಿಬಿದ್ದಿರುತ್ತಾರೆ. ಇವರ ಕೈಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿದಾಗ, ನೀರು ತಿಳಿ ಗುಲಾಬಿ ಬಣ್ಣಕ್ಕೆ ಬದಲಾಗಿದ್ದು, ಲಂಚದ ಹಣ ಸ್ವೀಕರಿಸಿರುವುದು ದೃಢಪಟ್ಟಿರುತ್ತದೆ. ಈ ಸಂಬಂಧವಾಗಿ ಶ್ರೀ ನಾಗಭೂಷಣ್ ರವರನ್ನು ದಿನಾಂಕ : 28–06–10 ರಂದು ಮಧ್ಯಾಹ್ನ 02–15 ಗಂಟೆಗೆ ಲೋಕಾಯುಕ್ತ ಪೊಲೀಸರು ಆರೋಪಿ–1 ಎಂಬುದಾಗಿ ದಸ್ತಗಿರಿ ಮಾಡಿದ್ದು, ಇವರು ಲೋಕಾಯುಕ್ತ ಪೊಲೀಸರಿಗೆ ನೀಡಿದ ಸ್ವಲಿಖಿತ ಹೇಳಿಕೆಯಲ್ಲಿ, ಪರಿಹಾರದ ಚೆಕ್ ನೀಡುವ ಸಮಯದಲ್ಲಿ ಸ್ವತ್ತಿನ ಮಾಲೀಕರಿಂದ ಹಣ ಪಡೆಯುವ ಬಗ್ಗೆ ಶ್ರೀ ನಾಗರಾಜು, ವಿಶೇಷ ಭೂ ಸ್ವಾಧೀನಾಧಿಕಾರಿಗಳು ತಿಳಿಸಿದ್ದರ ಮೇರೆಗೆ ಶ್ರೀ ರುಕ್ಮಾಂಗದ ರವರಿಂದ ಹಣ ಪಡೆದಿರುತ್ತೇನೆ ಎಂದು ಹೇಳಿಕೆ ನೀಡಿರುವುದರಿಂದ, ಲೋಕಾಯುಕ್ತ ಪೊಲೀಸರು ಶ್ರೀ ನಾಗರಾಜು, ವಿಶೇಷ ಭೂ ಸ್ವಾಧೀನಾಧಿಕಾರಿ ರವರನ್ನು ದಿನಾಂಕ : 28–06–10 ರಂದು ಮಧ್ಯಾಹ್ನ 03–30 ಗಂಟೆಗೆ ಆರೋಪಿ–2 ಎಂಬುದಾಗಿ ದಸ್ತಗಿರಿ ಮಾಡಿ ಘನ ನ್ಯಾಯಾಧೀಶರ ಮುಂದೆ ಹಾಜರುಪಡಿಸಿದ್ದು, ಇವರು ದಿನಾಂಕ : 12–07–10 ರವರೆಗೆ ನ್ಯಾಯಾಂಗ ಬಂಧನದಲ್ಲಿರುತ್ತಾರೆ.

ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಆಪಾದಿತ ಅಧಿಕಾರಿ ಶ್ರೀ ಎನ್.ಆರ್. ನಾಗರಾಜು, ವಿಶೇಷ ಭೂ ಸ್ವಾಧೀನಾಧಿಕಾರಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು ರವರನ್ನು ಕರ್ನಾಟಕ ಲೋಕಾಯುಕ್ತ ಪೊಲೀಸರು ಲಂಚ ನಿರೋಧ ಕಾಯ್ದೆ, 1988 ರಡಿ ದಿನಾಂಕ : 28–06–10 ರಂದು ಮಧ್ಯಾಹ್ನ 03–30 ಗಂಟೆಗೆ ದಸ್ತಗಿರಿಯಾಗಿ ದಿನಾಂಕ : 12–07–10 ರವರೆಗೆ ನ್ಯಾಯಾಂಗ ಬಂಧನದಲ್ಲಿರುವುದರಿಂದಲೂ, ಆಪಾದಿತರು ಸಾಕ್ಷ್ಯಾಧಾರಗಳನ್ನು ತಿರುಚುವ ಸಾಧ್ಯತೆಯನ್ನು ತಪ್ಪಿಸಲು ಮತ್ತು ಪ್ರಕರಣದ ಸುಗಮ ತನಿಖೆಗೆ ಅವಕಾಶ ಕಲ್ಪಿಸುವ ಅವಶ್ಯಕತೆ ಇರುವುದರಿಂದಲೂ, ಸರ್ಕಾರವು, ಶ್ರೀ ಎನ್.ಆರ್.ನಾಗರಾಜು, ಕೆಎಎಸ್ (ಕಿರಿಯ ಶ್ರೇಣಿ), ವಿಶೇಷ ಭೂ ಸ್ವಾಧೀನಾಧಿಕಾರಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು ಇವರನ್ನು ಮುಂದಿನ ತನಿಖೆ/ವಿಚಾರಣೆಯನ್ನು ಕಾಯ್ದಿರಿಸಿ, ಸೇವೆಯಿಂದ ಅಮಾನತ್ತಿನಲ್ಲಿರಿಸಲು ನಿರ್ಣಯಿಸಿ, ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 024 ಕೆಇವಿ 2010, ಬೆಂಗಳೂರು, ದಿನಾಂಕ: 17.08.2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957 ರ ನಿಯಮ 10 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶಿಸ್ತು ಕ್ರಮವನ್ನು ಕಾಯ್ದಿರಿಸಿ, ಸರ್ಕಾರವು ಶ್ರೀ ಎನ್.ಆರ್.ನಾಗರಾಜು, ಕೆಎಎಸ್ (ಕಿರಿಯ ಶ್ರೇಣಿ), ವಿಶೇಷ ಭೂ ಸ್ವಾಧೀನಾಧಿಕಾರಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು ಇವರನ್ನು ದಿನಾಂಕ : 28–06–10 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎನ್.ಆರ್. ನಾಗರಾಜು, ಕೆಎಎಸ್ (ಕಿರಿಯ ಶ್ರೇಣಿ) ರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರಂತೆ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಇವರು ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ. 2202

**ಡಾ: ಎಂ.ಟಿ.ರೇಜು**

ಸರ್ಕಾರದ ಉಪ ಕಾರ್ಯದರ್ಶಿ

ಸಿಆಸುಇ ಇಲಾಖೆ(ಸೇವೆಗಳು–2)

## PLANNING, PROGRAMME MONITORING AND STATISTICS SECRETARIAT

Sub: Reconstitution of Inter Departmental Co-ordination Committee on Civil Registration System.

Read: G.O. No. IFS 30 SLM 93, Bangalore, dated 20-03-1993.

**Preamble:**

In the Government Order read avove, the Inter Departmental Co-ordination Committee on Civil Registration System was reconstituted to generally oversee the working of the Registration of Births and Deaths Act, 1969 and the rules framed thereunder and to resolve difficulties on recommendations made by the National Conference of Chief Registrars of Births and Deaths and on the suggestion of the Registrar General India. Due to change in the nomenclature of some of the Departments and also to include the officers of some of the relevant Departments viz., Police Department, Rural Development and Panchayat Raj, Food and Civil Supplies, e-Governance Department, Public Instruction (Primary and Secondary) as Members of the Committee, it is now considered necessary to reconstitute the above committee again.

**Government Order No.: PD 162 SMC 2010(1), Bangalore Dated: 13-08-2010**

Accordingly, in supersession of the order read above, Government are pleased to reconstitute with immediate effect and until further orders the Inter Departmental Co-ordination Committee on Civil Registration System with the following members :-

| | | |
|---|---|---|
| 1. | Additional Chief Secretary to Govt./Principal Secy. To Govt./ Secretary to Govt., Planning, Programme Monitoring & Statistics Dept. | Chairman |
| 2. | Additional Chief Secretary to Govt./Principal Secy. To Govt./ Secretary to Govt., Revenue Department. | Member |
| 3. | Additional Chief Secretary to Govt./Principal Secy. To Govt./ Secretary to Govt., Health and Family Welfare Dept. | Member |
| 4. | Additional Chief Secretary to Govt./Principal Secy. To Govt./ Secretary to Govt., Urban Development Dept. | Member |
| 5. | Additional Chief Secretary to Govt./Principal Secy. To Govt./ Secretary to Govt., Rural Development and Panchayat Raj Dept. | Member |
| 6. | Additional Chief Secretary to Govt./Principal Secy. To Govt./ Secretary to Govt., Food & Civil Supplies Department. | Member |
| 7. | Additional Chief Secretary to Govt./Principal Secy. To Govt./ Secretary to Govt., Women & Child Development Dept. | Member |

| | | |
|---|---|---|
| 8. | Additional Chief Secretary to Govt./Principal Secy. To Govt./ Secretary to Govt., e-Governance Department. | Member |
| 9. | Additional Chief Secretary to Govt./Principal Secy. To Govt./ Secretary to Govt., Education (Primary & Secondary) Dept. | Member |
| 10. | Representatives from Registrar General of India, NewDelhi | Member |
| 11. | Commissioner for Public Instruction | Member |
| 12. | Director of Census Operation in Karnataka | Member |
| 13. | Commissioner/Director of Municipal Administration | Member |
| 14. | Director of Printing, Stationery and Publications | Member |
| 15. | Director, Women & Child Development Department | Member |
| 16. | Commissioner/Director of Health and Family Welfare Services | Member |
| 17. | Director of Information and Publicity | Member |
| 18. | Director of Medical Education | Member |
| 19. | Inspector General of Police | Member |
| 20. | Director of Economics and Statistics | Member Secretary |
| 21. | Joint Director(Statistics), Bruhat Bangalore Mahanagara Palike | Member |

The Committee will meet at least once in a year and review the registration of births and deaths in the State.

By Order and in the name of the Governor of Karnataka

**V.SAIBABA**

Under Secretary to Government,
Planning, Programme Monitoring
and Statistics Department (S-5)

P.R. No. 2203

## ಸಹಕಾರ ಸಚಿವಾಲಯ

**ವಿಷಯ** : ಶ್ರೀ ಶಂಕರ ಸೇವಾ ಸಮಿತಿ (ರಿ), ರಾಜಾಜಿನಗರ, ಬೆಂಗಳೂರು ಈ ಸಮಿತಿಗೆ ನೇಮಿಸಲಾದ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ** :
1. ಸರ್ಕಾರದ ಆದೇಶ ಸಂಖ್ಯೆ : ಸಇ 116 ಸಸಂನೋ 2009 ದಿನಾಂಕ : 23–10–2009.
2. ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರ ಪತ್ರ ಸಂಖ್ಯೆ : ಜೆಆರ್‌ಬಿ/ಆಶಾ/02/2009–10 ದಿನಾಂಕ : 13–07–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ : 23–10–2009ರ ಆದೇಶದಲ್ಲಿ ಶ್ರೀ ಶಂಕರ ಸೇವಾ ಸಮಿತಿ (ರಿ), ರಾಜಾಜಿನಗರ, ಬೆಂಗಳೂರು ಈ ಸಂಸ್ಥೆಯ ಆಡಳಿತ ಮಂಡಳಿ ಅವಧಿಯು ವರ್ಷಾಂತ್ಯಕ್ಕೆ ಮುಕ್ತಾಯವಾಗಲಿರುವುದರಿಂದ ಹಾಗೂ ಪ್ರಸ್ತುತ ಸಂಘದ ಸದಸ್ಯತ್ವದ ಬಗ್ಗೆ ಗೊಂದಲವಿರುವುದರಿಂದ ಮತ್ತು ಸಂಸ್ಥೆಯ ಹಿತದೃಷ್ಟಿಯಿಂದ ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ವೀರೇಶ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು ಇವರನ್ನು ಆಡಳಿತಾಧಿಕಾರಿಯನ್ನಾಗಿ ಮೂರು (03) ತಿಂಗಳ ಅವಧಿಗೆ ಅಥವಾ ಸದರಿ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ. ನಂತರ ಕಾಲಕಾಲಕ್ಕೆ ಈ ಅವಧಿಯನ್ನು ದಿನಾಂಕ : 23–02–2010ರ ಆದೇಶದಲ್ಲಿ ದಿನಾಂಕ : 22–07–2010ರ ವರೆಗೆ ವಿಸ್ತರಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ : 13–07–2010 ರ ಪತ್ರದಲ್ಲಿ ಆಡಳಿತಾಧಿಕಾರಿಗಳ ಅವಧಿಯು ದಿನಾಂಕ : 23–01–2010ಕ್ಕೆ ಮುಕ್ತಾಯವಾಗುತ್ತದೆ. ಶ್ರೀ ಶಂಕರ ಸೇವಾ ಸಮಿತಿಯ ಅಂದಿನ ಆಡಳಿತ ಮಂಡಳಿಯು ಕರ್ನಾಟಕ ಗೌರವ ಉಚ್ಛನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಲ್ಲಿಸಿ, ತಡೆಯಾಜ್ಞೆಯನ್ನು ತಂದಿರುತ್ತದೆ. ಸದರಿ ರಿಟ್ ಅರ್ಜಿ ನ್ಯಾಯಾಲಯದಲ್ಲಿ ವಿಚಾರಣಾ ಹಂತದಲ್ಲಿರುತ್ತದೆ. ಆದ್ದರಿಂದ, ಆಡಳಿತಾಧಿಕಾರಿಗಳ ಅವಧಿಯನ್ನು ಮತ್ತೆ ದಿನಾಂಕ : 23–07–2010 ರಿಂದ ಮತ್ತೆ ಆರು ತಿಂಗಳ ಅವಧಿಗೆ ವಿಸ್ತರಿಸಲು ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಸರ್ಕಾರವು ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಸಇ 116 ಸಸಂನೋ 2009, ಬೆಂಗಳೂರು, ದಿನಾಂಕ: 11.08.2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಶಂಕರ ಸೇವಾ ಸಮಿತಿ (ರಿ), ರಾಜಾಜಿನಗರ, ಬೆಂಗಳೂರು ಈ ಸಂಸ್ಥೆಗೆ ನೇಮಿಸಲಾದ ಆಡಳಿತಾಧಿಕಾರಿಯ ಅವಧಿಯನ್ನು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿನಾಂಕ : 23–07–2010 ರಿಂದ ಮತ್ತೆ ಆರು (06) ತಿಂಗಳ ಅವಧಿಗೆ ವಿಸ್ತರಿಸಿ ಆದೇಶಿಸಿದೆ. ಸದರಿ ಅವಧಿಯಲ್ಲಿ ಸದರಿ

ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ನೇಮಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಸಂಘದಲ್ಲಿ ಹಾಲಿ ನೋಂದಾಯಿತವಾಗಿರುವ ಸದಸ್ಯರುಗಳಿಂದ ಚುನಾವಣೆ ನಡೆಸಿ ಹೊಸ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ನಂಜುಂಡಪ್ಪ**

ಪಿ.ಆರ್. ನಂ. 2204

ಸರ್ಕಾರದ ಅಧೀನ ಕಾರ್ಯದರ್ಶಿ–2

ಸಹಕಾರ ಇಲಾಖೆ

## ವಸತಿ ಸಚಿವಾಲಯ

### ಸುತ್ತೋಲೆ

**ಸಂ. ವಇ 6, ಹೆಚ್ಎಹೆಚ್ 2010, ಬೆಂಗಳೂರು, ದಿನಾಂಕ : 11ನೇ ಆಗಸ್ಟ್ 2010**

**ವಿಷಯ** : ನಿವೇಶನ ರಚಿಸುವ ಬಡಾವಣೆಗಳಲ್ಲಿ ಮೂಲಭೂತ ಸೌಕರ್ಯ ಒದಗಿಸಲು ಸಂಪನ್ಮೂಲಗಳನ್ನು ಕ್ರೋಢಿಕರಿಸುವ ಬಗ್ಗೆ.

ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿನ ನಿವೇಶನರಹಿತರಿಗೆ ವಸತಿ ಕಲ್ಪಿಸುವುದಕ್ಕಾಗಿ ವಿವಿಧ ನಿವೇಶನ ಯೋಜನೆಗಳಡಿಯಲ್ಲಿ ಲಭ್ಯವಿರುವ ಸರ್ಕಾರಿ ಜಮೀನು ಅಥವಾ ಖರೀದಿಸಲಾದ ಖಾಸಗಿ ಜಮೀನಿನಲ್ಲಿ ಫಲಾನುಭವಿಗಳಿಗೆ ನಿವೇಶನಗಳನ್ನು ಹಂಚಲು ಬಡಾವಣೆಗಳನ್ನು ರಚಿಸಲಾಗುತ್ತಿದೆ. ಈ ಬಡಾವಣೆಗಳಿಗೆ ಸಂಬಂಧಪಟ್ಟ ಪಂಚಾಯತ್ ರಾಜ್ ಸಂಸ್ಥೆಗಳಾಗಲೀ ಅಥವಾ ನಗರ ಸ್ಥಳೀಯ ಸಂಸ್ಥೆಗಳಾಗಲೀ ಮೂಲಭೂತ ಸೌಕರ್ಯಗಳಾದ ರಸ್ತೆ, ಒಳಚರಂಡಿ, ಕುಡಿಯುವ ನೀರು, ವಿದ್ಯುತ್ ಸೌಕರ್ಯ ಮುಂತಾದ ಅನುಕೂಲಗಳನ್ನು ಕಲ್ಪಿಸಬೇಕಾಗಿರುತ್ತದೆ. ಆದರೆ ಈ ಸಂಸ್ಥೆಗಳಲ್ಲಿ ಅನುದಾನದ ತೀವ್ರ ಕೊರತೆಯಿಂದಾಗಿ ಮೂಲಭೂತ ಸೌಕರ್ಯ ಒದಗಿಸಲು ಸಾಧ್ಯವಾಗುತ್ತಿಲ್ಲ. ನಗರ ಆಶ್ರಯ ಯೋಜನೆಯಡಿಯಲ್ಲಿ ಇತ್ತೀಚೆಗೆ ರಚಿಸಲಾದ ಕೆಲವು ಬಡಾವಣೆಗಳಲ್ಲಿ ನಿವೇಶನಗಳನ್ನು ಹಂಚಿ ಮನೆಗಳನ್ನು ನಿರ್ಮಿಸಲಾಗಿದೆ. ಆದರೂ ಅಲ್ಲಿ ಮೂಲಭೂತ ಸೌಕರ್ಯ ಇಲ್ಲದೇ ಇರುವುದರಿಂದ ಫಲಾನುಭವಿಗಳು ವಾಸ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಕಳೆದ ಎರಡು ವರ್ಷಗಳಲ್ಲಿ ಸರ್ಕಾರವು ಬಡಾವಣೆಗಳಿಗೆ ಮೂಲಭೂತ ಸೌಕರ್ಯ ಒದಗಿಸಲು ಅನುದಾನ ಬಿಡುಗಡೆ ಮಾಡಲಾಗಿದೆಯಾದರೂ, ಈ ಅನುದಾನವು ಕೇವಲ ಕುಡಿಯುವ ನೀರು ಹಾಗೂ ವಿದ್ಯುತ್ ಪೂರೈಕೆಗೆ ಮಾತ್ರ ಸಾಕಾಗುತ್ತಿದೆ. ಈ ಹಿನ್ನೆಲೆಯಲ್ಲಿ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಈಗಾಗಲೇ ರಚಿಸಿದ ಬಡಾವಣೆಗಳಿಗೆ ಹಾಗೂ ಇನ್ನು ಮುಂದೆ ರಚಿಸಲಾಗುವ ಬಡಾವಣೆಗಳಿಗೆ ಮೂಲಭೂತ ಸೌಕರ್ಯ ಒದಗಿಸಲು ಸಂಪನ್ಮೂಲ ಕ್ರೋಢೀಕರಿಸುವ ತೀವ್ರ ಅವಶ್ಯಕತೆ ಕಂಡುಬಂದಿರುತ್ತದೆ.

2. ದಿನಾಂಕ 06–07–2010ರಂದು ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಅಧ್ಯಕ್ಷತೆಯಲ್ಲಿ ಹಾಗೂ ಮಾನ್ಯ ವಸತಿ ಸಚಿವರ ಉಪಸ್ಥಿತಿಯಲ್ಲಿ ಬೆಳಗಾವಿ ಹಾಗೂ ಗುಲ್ಬರ್ಗಾ ವಿಭಾಗದ ಜಿಲ್ಲೆಗಳಲ್ಲಿ ವಿವಿಧ ವಸತಿ ಯೋಜನೆಗಳ ಪ್ರಗತಿ ಪರಿಶೀಲನೆ ಕುರಿತು ನಡೆದ ವಿಡಿಯೋ ಕಾನ್ಫರೆನ್ಸ್‌ನಲ್ಲಿ ಈ ವಿಷಯ ಚರ್ಚೆಗೊಂಡು ಬಡಾವಣೆಗಳಲ್ಲಿನ ಪ್ರಮುಖ ರಸ್ತೆ ಮತ್ತು ಮೂಲೆ ನಿವೇಶನಗಳನ್ನು ಹರಾಜು ಹಾಕಿ ಬಂದ ಹಣದಿಂದ ಜಮೀನು ಅಭಿವೃದ್ಧಿಪಡಿಸಬೇಕಾಗುತ್ತದೆಂದು ನಿರ್ಣಯಿಸಲಾಗಿರುತ್ತದೆ.

3. ನಗರ ಪ್ರದೇಶ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಇನ್ನು ಮುಂದೆ ಲಭ್ಯವಿರುವ ಸರ್ಕಾರಿ ಜಮೀನಿನಲ್ಲಿ ಮತ್ತು ಖರೀದಿಸಲಾದ ಖಾಸಗಿ ಜಮೀನಿನಲ್ಲಿ ನಿವೇಶನಗಳ ಹಂಚಿಕೆಗಾಗಿ ಬಡಾವಣೆ ರಚಿಸಲು ಕುಡಿಯುವ ನೀರು, ವಿದ್ಯುತ್ ಸೌಕರ್ಯ, ರಸ್ತೆ, ಒಳಚರಂಡಿ ಮುಂತಾದವುಗಳಿಗಾಗಿ ಸರ್ಕಾರದ ವಿವಿಧ ಯೋಜನೆಗಳಡಿ ನೀಡಿದ ಅನುದಾನವನ್ನು ಉಪಯೋಗಿಸಿಕೊಳ್ಳತಕ್ಕದ್ದು, ಒಂದು ವೇಳೆ, ಈ ಅನುದಾನ ಸಾಕಾಗದಿದ್ದ ಪಕ್ಷದಲ್ಲಿ, ಆ ಬಡಾವಣೆಗಳಲ್ಲಿನ ಮೂಲೆ ನಿವೇಶನಗಳು, ಮುಖ್ಯ ರಸ್ತೆಯ ಹಾಗೂ ಮಹತ್ವದ ಸ್ಥಳಗಳಲ್ಲಿನ ನಿವೇಶನಗಳನ್ನು ಕಾಯ್ದಿರಿಸಿ ತದನಂತರ ಜಿಲ್ಲಾಧಿಕಾರಿಗಳ ಅನುಮೋದನೆಯೊಂದಿಗೆ ಬಹಿರಂಗವಾಗಿ ಹರಾಜು ಮಾಡಿ ಅದರಿಂದ ಬರುವ ಅನುದಾನದಿಂದ ಯೋಗ್ಯ ರೀತಿಯಲ್ಲಿ ಕುಡಿಯುವ ನೀರಿನ ಪೂರೈಕೆ, ವಿದ್ಯುತ್ ಪೂರೈಕೆ, ಒಳಚರಂಡಿ ವ್ಯವಸ್ಥೆ, ರಸ್ತೆ ಸೌಲಭ್ಯ ಮುಂತಾದ ಮೂಲಭೂತ ಸೌಕರ್ಯಗಳನ್ನು ಒದಗಿಸಲು ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದೊಂದಿಗೆ ಸಮಾಲೋಚಿಸಿ ನಿಯಮಾವಳಿಗಳ ಮೇರೆಗೆ ಅವಶ್ಯ ಕ್ರಮಗಳನ್ನು ಕೈಗೊಳ್ಳಬಹುದಾಗಿರುತ್ತದೆ.

**ಜಿ.ವಿ. ಕೊಂಗವಾಡ**

ಪಿ.ಆರ್. ನಂ. 2205

ಸರ್ಕಾರದ ಕಾರ್ಯದರ್ಶಿ

ವಸತಿ ಇಲಾಖೆ

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯದಲ್ಲಿ ಮಾನ್ಯತೆ ಪಡೆದ ಪದವಿ ಪೂರ್ವ ಕಾಲೇಜುಗಳಲ್ಲಿ ಯುವ ಸಂಸತ್ ಸ್ಪರ್ಧೆಯನ್ನು ವ್ಯವಸ್ಥೆಗೊಳಿಸುವುದಕ್ಕಾಗಿ ಹಣಕಾಸು ನೆರವು ಯೋಜನೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 15 ಸಂವ್ಯವಿ 2009, ದಿನಾಂಕ 14–07–2009.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯದಲ್ಲಿ ಪ್ರೌಢ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ನಡೆಸುವ ಯುವ ಸಂಸತ್ ಮಾದರಿಯಲ್ಲಿ 2010–11ನೇ ಶೈಕ್ಷಣಿಕ ವರ್ಷದಿಂದ ಪದವಿ ಪೂರ್ವ ಕಾಲೇಜುಗಳಲ್ಲಿ ಯುವ ಸಂಸತ್ ಸ್ಪರ್ಧೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿದ್ದುದರಿಂದ ಸದರಿ ಸ್ಪರ್ಧೆಗೆ ಹಣಕಾಸು ಯೋಜನೆಯ ಪ್ರತಿಯನ್ನು ಈ ಆದೇಶಕ್ಕೆ ಲಗತ್ತಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಸಂವ್ಯಶಾಇ 12 ಸಂವ್ಯವಿ 2010, ಬೆಂಗಳೂರು, ದಿನಾಂಕ : 13–07–2010**

ಕರ್ನಾಟಕ ರಾಜ್ಯದ ಪದವಿ ಪೂರ್ವ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಯುವ ಸಂಸತ್ ಸ್ಪರ್ಧೆಗಳನ್ನು ಪ್ರತಿ ವರ್ಷ ನಡೆಸುವುದಕ್ಕಾಗಿ ಹಣಕಾಸಿನ ನೆರವು ಯೋಜನೆ 2010ನ್ನು (ಅನುಬಂಧ–1 ರಲ್ಲಿ ಲಗತ್ತಿಸಿ) ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ರಾಜ್ಯದಲ್ಲಿ ಜಾರಿಗೊಳಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಜಿ. ಶ್ಯಾಮಲ**
ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

## ಅನುಬಂಧ –1

### ಕರ್ನಾಟಕ ರಾಜ್ಯದಲ್ಲಿ ಮಾನ್ಯತೆ ಪಡೆದ ಪದವಿ ಪೂರ್ವ ಕಾಲೇಜುಗಳಲ್ಲಿ ಯುವ ಸಂಸತ್ ಸ್ಪರ್ಧೆಯನ್ನು ವ್ಯವಸ್ಥೆಗೊಳಿಸುವುದಕ್ಕಾಗಿ ಹಣಕಾಸು ನೆರವು ಯೋಜನೆ

### ಪೀಠಿಕೆ

ಶೈಕ್ಷಣಿಕ ಸಂಸ್ಥೆಗಳಲ್ಲಿ ಯುವ ಸಂಸತ್ ಸ್ಪರ್ಧೆಗಳನ್ನು ಏರ್ಪಡಿಸಿ ನಡೆಸುವ ಪರಿಕಲ್ಪನೆ 1962 ರಲ್ಲಿ ಮುಂಬಯಿಯಲ್ಲಿ ನಡೆದ ನಾಲ್ಕನೇ ಅಖಿಲ ಭಾರತ ಸಚೇತಕರ ಸಮ್ಮೇಳನದಲ್ಲಿ ರೂಪ ತಳೆಯಿತು. ಸದರಿ ಸಮ್ಮೇಳದಲ್ಲಿ ಇತರೆ ವಿಷಯಗಳ ಜೊತೆಗೆ ಈ ಮುಂದಿನ ಶಿಫಾರಸ್ಸುಗಳನ್ನು ಮಾಡಲಾಯಿತು:–

"ಈ ಸಮಿತಿಯು, ಅಣಕು ಸಂಸತ್ ಕಾರ್ಯಕ್ರಮಗಳನ್ನು ಶೈಕ್ಷಣಿಕ ಸಂಸ್ಥೆಗಳಲ್ಲಿ ಮತ್ತು ಪಂಚಾಯಿತಿಗಳ ಮೂಲಕ ಗ್ರಾಮೀಣ ಪ್ರದೇಶಗಳಲ್ಲಿ ನಡೆಸಲು ಸರ್ಕಾರವು ಪ್ರೋತ್ಸಾಹಿಸತಕ್ಕದ್ದೆಂದು ಶಿಫಾರಸು ಮಾಡುತ್ತದೆ".

ಮೇಲ್ಕಂಡ ಶಿಫಾರಸುಗಳನ್ನು 1966 ರಲ್ಲಿ ಬೆಂಗಳೂರಿನಲ್ಲಿ ನಡೆದ ಐದನೇ ಅಖಿಲ ಭಾರತ ಸಚೇತಕರ ಸಮ್ಮೇಳನವು ಈ ಮುಂದೆ ಹೇಳಿರುವಂತೆ ಪುನರುಚ್ಚರಿಸಿತು:–

"ಮುಂಬಯಿಯಲ್ಲಿ ನಡೆದ ನಾಲ್ಕನೇ ಅಖಿಲ ಭಾರತ ಸಚೇತಕರ ಸಮ್ಮೇಳನವು, ಜನಪ್ರತಿನಿಧಿ ಸಂಸ್ಥೆಗಳ ಪಾತ್ರದ ಬಗ್ಗೆ ಅರಿವು ಮೂಡಿಸಲು ಗ್ರಾಮ ಪಂಚಾಯಿತಿಗಳಲ್ಲಿ ಅಣಕು ಸಂಸತ್ ಕಾರ್ಯಕ್ರಮಗಳನ್ನು ನಡೆಸಬೇಕೆಂದು ಶಿಫಾರಸು ಮಾಡಿತ್ತು. ಈ ಶಿಫಾರಸುಗಳನ್ನು ಕೆಲವು ರಾಜ್ಯಗಳಲ್ಲಿ ಜಾರಿಗೆ ತಂದಿರುವುದಿಲ್ಲ ಎಂಬುದನ್ನು ಈ ಸಮ್ಮೇಳನವು ಗಮನಿಸಿದೆ. ಸಮ್ಮೇಳನವು ಸಂಬಂಧಪಟ್ಟ ರಾಜ್ಯ ಸರ್ಕಾರಗಳು ತಮ್ಮ ತೀರ್ಮಾನಗಳನ್ನು ಮರುಪರಿಶೀಲಿಸುವಂತೆ ಅವುಗಳ ಮನವೊಲಿಸಬೇಕೆಂದು ಪುನರುಚ್ಚರಿಸುತ್ತದೆ."

ಮೇಲ್ಕಂಡ ಶಿಫಾರಸುಗಳಿಗನುಸಾರ, ಸಂಸದೀಯ ವ್ಯವಹಾರಗಳ ಮಂತ್ರಾಲಯವು ಅಣಕು ಸಂಸತ್ (ಈಗ "ಯುವ ಸಂಸತ್") ಸ್ಪರ್ಧೆಯ ಯೋಜನೆಯ ವಿವರಗಳನ್ನು ತಯಾರಿಸಿತು ಮತ್ತು ಅದನ್ನು ಪ್ರಾಯೋಗಿಕ ರೂಪದಲ್ಲಿ ನಡೆಸುವ ಉದ್ದೇಶದಿಂದ ದೆಹಲಿಯ ಪ್ರೌಢ ಶಾಲೆಗಳಲ್ಲಿ ಸ್ಪರ್ಧೆಗಳನ್ನು ಪ್ರಾರಂಭಿಸಲು ತೀರ್ಮಾನಿಸಿತು. 1967 ರಲ್ಲಿ ಸಿಮ್ಲಾದಲ್ಲಿ ಮತ್ತು 1969 ರಲ್ಲಿ ಮದ್ರಾಸಿನಲ್ಲಿ ಅನುಕ್ರಮವಾಗಿ ನಡೆದ ಆರು ಮತ್ತು ಏಳನೇ ಅಖಿಲಭಾರತ ಸಚೇತಕರ ಸಮ್ಮೇಳನದಲ್ಲಿ ಈ ಮುಂದಿನ ಶಿಫಾರಸುಗಳನ್ನು ಮಾಡಲಾಯಿತು:–

"ದೆಹಲಿಯ ಶಾಲೆಗಳಲ್ಲಿ "ಯುವ ಸಂಸತ್" ಕಾರ್ಯಕ್ರಮವನ್ನು ಉತ್ತೇಜಿಸುವುದಕ್ಕಾಗಿ ಸಂಸದೀಯ ವ್ಯವಹಾರಗಳ ಮಂತ್ರಾಲಯವು ಮಾಡಿರುವ ಉತ್ತಮ ಕಾರ್ಯವನ್ನು ಪ್ರಶಂಸಿಸುತ್ತಾ, ಉಳಿದ ರಾಜ್ಯಗಳು ಸಹ ತಮ್ಮ ತಮ್ಮ ರಾಜ್ಯಗಳಲ್ಲಿ ಈ ಯೋಜನೆಯನ್ನು ಅಳವಡಿಸಲು ವ್ಯವಸ್ಥೆಯನ್ನು ಮಾಡತಕ್ಕದ್ದೆಂದು ಸಮ್ಮೇಳನವು ಆಗ್ರಹಪೂರ್ವಕವಾಗಿ ಶಿಫಾರಸು ಮಾಡುತ್ತದೆ. [6ನೇ ಅಖಿಲ ಭಾರತ ಸಚೇತಕರ ಸಮ್ಮೇಳನ]"

ದೆಹಲಿಯ ಶಾಲೆಗಳಲ್ಲಿ 'ಅಣಕು ಸಂಸತ್' ಯೋಜನೆಯ ಯಶಸ್ವಿ ಅನುಷ್ಠಾನವನ್ನು ಹಾಗೂ ಪ್ರಮುಖ ಸಂಸದರು ಪತ್ರಿಕಾ ಮಾಧ್ಯಮಗಳು ಮತ್ತು ಶಿಕ್ಷಣ ತಜ್ಞರಿಂದ ಆ ಬಗ್ಗೆ ಬಂದ ವ್ಯಾಪಕ ಮೆಚ್ಚುಗೆಯನ್ನು ಗಮನದಲ್ಲಿಟ್ಟುಕೊಂಡು ಮತ್ತು ರಾಷ್ಟ್ರದಲ್ಲಿ ಸುಭದ್ರ ಸಂಸದೀಯ ಪದ್ಧತಿಯನ್ನು ಅನುಷ್ಠಾನಗೊಳಿಸುವ ದೃಷ್ಟಿಯಿಂದ ಸಮ್ಮೇಳನವು ಈ ಮುಂದಿನ ಶಿಫಾರಸ್ಸುಗಳನ್ನು ಮಾಡುತ್ತದೆ.–

(ಎ) ಸಂಸದೀಯ ವ್ಯವಹಾರಗಳ ಕೇಂದ್ರ ಮಂತ್ರಾಲಯವು ಅನುಸರಿಸಿದ ಮಾದರಿಯನ್ನೇ ಅನುಸರಿಸಿ ಎಲ್ಲಾ ರಾಜ್ಯಗಳು/ಕೇಂದ್ರಾಡಳಿತ ಪ್ರದೇಶಗಳು ತಮ್ಮ ತಮ್ಮ ರಾಜ್ಯ/ಕೇಂದ್ರಾಡಳಿತ ಪ್ರದೇಶಗಳಲ್ಲಿ ಈ ಯೋಜನೆಯನ್ನು ಜಾರಿಗೊಳಿಸಲು ಕ್ರಮಕೈಗೊಳ್ಳತಕ್ಕದ್ದು;

(ಬಿ) ಸಂಸದೀಯ ವ್ಯವಹಾರಗಳ ಕೇಂದ್ರ ಮಂತ್ರಾಲಯವು, ಅಗತ್ಯವಿದ್ದಲ್ಲಿ ಹಣಕಾಸು ನೆರವನ್ನು ನೀಡುವ ಮೂಲಕ ಯೋಜನೆಯನ್ನು ಜಾರಿಗೆ ತರಲು ರಾಜ್ಯಗಳು/ಕೇಂದ್ರಾಡಳಿತ ಪ್ರದೇಶಗಳಿಗೆ ಎಲ್ಲಾ ಬಗೆಯ ಪ್ರೋತ್ಸಾಹಗಳನ್ನು ನೀಡತಕ್ಕದ್ದು; ಮತ್ತು

(ಸಿ) ಸಂಸದೀಯ ವ್ಯವಹಾರಗಳ ಕೇಂದ್ರ ಮಂತ್ರಾಲಯವು ಯೋಜನೆಯನ್ನು ಈಗಾಗಲೇ ಜಾರಿಗೊಳಿಸಿರುವ ರಾಜ್ಯಗಳು/ಕೇಂದ್ರಾಡಳಿಕ ಪ್ರದೇಶಗಳ ನಡುವೆ ಅಂತರ್ ರಾಜ್ಯ ಸ್ಪರ್ಧೆಗಳನ್ನು ಸಹ ವ್ಯವಸ್ಥೆಗೊಳಿಸತಕ್ಕದ್ದು. [7ನೇ ಅಖಿಲ ಭಾರತ ಸಚೇತಕರ ಸಮ್ಮೇಳನ]"

7ನೇ ಅಖಿಲ ಭಾರತ ಸಚೇತಕರ ಸಮ್ಮೇಳನವು ಮಾಡಿದ ಮೇಲ್ಕಂಡ ಶಿಫಾರಸುಗಳ (ಬಿ) ಭಾಗದ ಪಾಲನೆಯಲ್ಲಿ, ಭಾರತ ಸರ್ಕಾರದ ಸಂಸದೀಯ ವ್ಯವಹಾರಗಳ ಮಂತ್ರಾಲಯವು, ರಾಜ್ಯಗಳು/ಕೇಂದ್ರಾಡಳಿತ ಪ್ರದೇಶಗಳಲ್ಲಿನ ಮಾನ್ಯತೆ ಪಡೆದ ಪ್ರೌಢ ಶಾಲೆಗಳಲ್ಲಿ ಯುವ ಸಂಸತ್ ಸ್ಪರ್ಧೆಯನ್ನು ವ್ಯವಸ್ಥೆಗೊಳಿಸುವುದಕ್ಕಾಗಿ – ರಾಜ್ಯ ಸರ್ಕಾರಗಳು/ಕೇಂದ್ರಾಡಳಿತ ಪ್ರದೇಶಗಳಿಗೆ ಹಣಕಾಸು ನೆರವು ನೀಡುವುದಕ್ಕಾಗಿ ಈ ಯೋಜನೆಯನ್ನು ರೂಪಿಸಿದೆ.

ಕರ್ನಾಟಕ ರಾಜ್ಯದಲ್ಲಿ ಕೇಂದ್ರ ಸರ್ಕಾರದ ಯೋಜನೆಯ ಅನ್ವಯ ಮಾನ್ಯತೆ ಪಡೆದ ಪ್ರೌಢ ಶಾಲಾ ವಿದ್ಯಾರ್ಥಿಗಳಿಗೆ ಯುವ ಸಂಸತ್ ಸ್ಪರ್ಧೆಗಳನ್ನು ನಡೆಸಲಾಗುತ್ತಿದೆ. 2010–11ನೇ ಸಾಲಿನಿಂದ ಈ ಕೆಳಗೆ ನಮೂದಿಸಿರುವ ಮಾರ್ಗಸೂಚಿಗಳನ್ವಯ ಪದವಿ ಪೂರ್ವ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಯುವ ಸಂಸತ್ ಸ್ಪರ್ಧೆಯನ್ನು ನಡೆಸಲಾಗುವುದು.

1. **ಯೋಜನೆಯ ಉದ್ದೇಶ:–** ಪ್ರಜಾಪ್ರಭುತ್ವದ ಬುನಾದಿಯನ್ನು ಭದ್ರಪಡಿಸುವ, ಶಿಸ್ತು, ಇತರರ ಅಭಿಪ್ರಾಯಗಳ ಬಗ್ಗೆ ಗೌರವ, ತಾಳ್ಮೆ ಮುಂತಾದ ಆರೋಗ್ಯಕರ ಗುಣ ವಿಶೇಷಗಳನ್ನು ಮೈಗೂಡಿಸುವ ಮತ್ತು ವಿದ್ಯಾರ್ಥಿ ಸಮುದಾಯದಲ್ಲಿ ಸಂಸತ್ ಕಾರ್ಯ ಕಲಾಪದ ಬಗ್ಗೆ ಅರಿವು ಮೂಡಿಸುವುದೇ ಇದರ ಉದ್ದೇಶ.
2. **ಯೋಜನೆಯ ಕಾರ್ಯಾಚರಣೆ:–** ಈ ಯೋಜನೆಯನ್ನು ಪದವಿ ಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶಕರ ಸಹಯೋಗದೊಂದಿಗೆ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಮಾರ್ಗದರ್ಶನದಲ್ಲಿ ಕಾರ್ಯಗತಗೊಳಿಸಲಾಗುವುದು.
3. **ಸ್ಪರ್ಧೆಯಲ್ಲಿ ಭಾಗವಹಿಸುವುದಕ್ಕೆ ಅರ್ಹತೆ:–** ಕರ್ನಾಟಕ ರಾಜ್ಯದ ಮಾನ್ಯತೆ ಪಡೆದ ಎಲ್ಲಾ ಪದವಿ ಪೂರ್ವ ಕಾಲೇಜುಗಳು ಸ್ಪರ್ಧೆಯಲ್ಲಿ ಭಾಗವಹಿಸಲು ಅರ್ಹತೆ ಹೊಂದಿವೆಯೆಂದು ಪರಿಗಣಿಸಬಹುದು. ಭಾಗವಹಿಸುವ ಶಾಲೆಗಳ ಪಟ್ಟಿಯನ್ನು, ಪ್ರತಿವರ್ಷದ ಮಾರ್ಚ್ 31ರೊಳಗೆ ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯವು ಅಂತಿಮಗೊಳಿಸುತ್ತವೆ.
4. **ಯುವ ಸಂಸತ್ ಸ್ಪರ್ಧೆಯನ್ನು ನಡೆಸುವ ಅವಧಿ:–** "ಯುವ ಸಂಸತ್ ಸ್ಪರ್ಧೆ" ಯನ್ನು ಪ್ರತಿ ವರ್ಷವು ನಡೆಸಲಾಗುವುದು. ಈ ಬಗ್ಗೆ ಸವಿವರ ಕಾರ್ಯಕ್ರಮವನ್ನು ಸಂಸದೀಯ ವ್ಯವಹಾರಗಳ ಇಲಾಖೆ ಹಾಗೂ ಪದವಿ ಪೂರ್ವ ಶಿಕ್ಷಣ ಇಲಾಖೆ ರೂಪಿಸತಕ್ಕದ್ದು ಮತ್ತು ವಾರ್ಷಿಕ ಸ್ಪರ್ಧೆಯಲ್ಲಿ ಭಾಗವಹಿಸಲಿರುವ ಸಂಸ್ಥೆಗಳಿಗೆ ಸುತ್ತೋಲೆ ಮೂಲಕ ತಿಳಿಸತಕ್ಕದ್ದು.
5. **ಯುವ ಸಂಸತ್ತಿನಲ್ಲಿ ಭಾಗವಹಿಸುವವರ ಸಂಖ್ಯೆ:–** ಪ್ರತಿಯೊಂದು ಪದವಿ ಪೂರ್ವ ಕಾಲೇಜಿನಲ್ಲಿ "ಯುವ ಸಂಸತ್ ಸ್ಪರ್ಧೆಯನ್ನು" ನಡೆಸುವುದಕ್ಕಾಗಿ ಬೇಕಾಗುವ ವಿದ್ಯಾರ್ಥಿಗಳ ಸಂಖ್ಯೆಗೆ ಯಾವುದೇ ಮಿತಿ ಇಲ್ಲ. ಆದಾಗ್ಯೂ, ಅಧಿವೇಶನದ ಅವಧಿಯನ್ನು ಸೀಮಿತಗೊಳಿಸುವುದು ಅಪೇಕ್ಷಣೀಯವಾಗಿರುವ ಕಾರಣ, ಭಾಗವಹಿಸಿರುವ ವಿದ್ಯಾರ್ಥಿಗಳಲ್ಲಿ ಹಲವರು ಸಂಸತ್ತಿನ ಅಧಿವೇಶನದ ಒಂದು ಚಿತ್ರಣವನ್ನು ಮೂಡಿಸುವುದಕ್ಕೆ ಮಾತ್ರವೇ ಸುಮ್ಮನೆ ಕುಳಿತುಕೊಂಡಿರಬೇಕಾಗುತ್ತದೆ ಮಾತ್ರವಲ್ಲದೆ ಅವರಿಗೆ ಮಾತನಾಡುವ ಅಗತ್ಯವಿರುವುದಿಲ್ಲ.
6. **ಯುವ ಸಂಸತ್ತಿನ ಅಧಿವೇಶನದ ಅವಧಿ:–** ಯುವ ಸಂಸತ್ತಿನ ಅಧಿವೇಶನದ ಅವಧಿಯು ಒಂದು ಗಂಟೆ ಅವಧಿಯನ್ನು ಮೀರತಕ್ಕದಲ್ಲ ಮತ್ತು ಇದರಲ್ಲಿ, ಸುಮಾರು 20 ನಿಮಿಷಗಳ ಅವಧಿಯನ್ನು ಪ್ರಶ್ನೆಗಳಿಗೆ ಕಾಯ್ದಿರಿಸತಕ್ಕದ್ದು.
7. **ಯುವ ಸಂಸತ್ತಿನ ಅಧಿವೇಶನದಲ್ಲಿಯ ಚರ್ಚೆಯ ವಿಷಯ:–** ಪ್ರಶ್ನೋತ್ತರಗಳಿಗೆ ಅಥವಾ ಇತರ ಚರ್ಚೆಗೆ ಯಾವುದೇ ನಿರ್ದಿಷ್ಟ ವಿಷಯಗಳನ್ನು ಗೊತ್ತುಪಡಿಸಿರುವುದಿಲ್ಲ. ಆದಾಗ್ಯೂ, ಯುವ ಸಂಸತ್ತಿನಲ್ಲಿ ಕೇಳಲಾಗುವ ಪ್ರಶ್ನೆಗಳು, ಇತ್ತೀಚಿನ ಕ್ಷೇಮಾಭ್ಯುದಯ ಕಾರ್ಯ ಚಟುವಟಿಕೆಗಳು, ರಾಷ್ಟ್ರದ ರಕ್ಷಣೆ, ಸಾಮಾಜಿಕ ನ್ಯಾಯ, ಸಮಾಜ ಸುಧಾರಣೆಗಳು, ಆರ್ಥಿಕ ಅಭಿವೃದ್ಧಿ, ಶಿಕ್ಷಣ, ಮತೀಯ ಸಾಮರಸ್ಯ, ಆರೋಗ್ಯ, ವಿದ್ಯಾರ್ಥಿಗಳಲ್ಲಿ ಶಿಸ್ತು ಮುಂತಾದವುಗಳಿಗೆ ಸಂಬಂಧಿಸಿದ ವಿಷಯಗಳಾಗಿರುವುದು ಅಪೇಕ್ಷಣೀಯ.
8. **ಭಾಷೆ:–** ಭಾಗವಹಿಸುವವರು, ಕನ್ನಡ ಹಿಂದಿ ಅಥವಾ ಇಂಗ್ಲೀಷ್ ಅಥವಾ ಸಂಬಂಧಪಟ್ಟ ರಾಜ್ಯ/ಕೇಂದ್ರಾಡಳಿತ ಪ್ರದೇಶದ ಸಂಸದೀಯ ವ್ಯವಹಾರಗಳ ಇಲಾಖೆ, ಸಾರ್ವಜನಿಕ ಶಿಕ್ಷಣ ನಿರ್ದೇಶನಾಲಯ ನಿರ್ದಿಷ್ಟಪಡಿಸಬಹುದಾದಂಥ ಪ್ರಾದೇಶಿಕ ಭಾಷೆಯಲ್ಲಿ ಮಾತನಾಡಬಹುದು.
9. **ಯುವ ಸಂಸತ್ ನಡೆಯುವ ಸ್ಥಳ:–** ಯುವ ಸಂಸತ್ ಸ್ಪರ್ಧೆಯನ್ನು ಸಾಧ್ಯವಾದಷ್ಟು ಮಟ್ಟಿಗೆ ಒಂದು ಶಿಕ್ಷಣ ಸಂಸ್ಥೆಯು ತನ್ನದೇ ಆದ ಕಟ್ಟಡದಲ್ಲಿ ಅಥವಾ ಅವು ಇಚ್ಚಿಸುವಂಥ ಯಾವುದೇ ಇತರ ಸ್ಥಳದಲ್ಲಿ ನಡೆಸತಕ್ಕದ್ದು, ಸ್ಪರ್ಧೆಯಲ್ಲಿ ಭಾಗವಹಿಸುವ ಸಂಸ್ಥೆಗಳು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಗೆ ಹಾಗೂ ಪದವಿ ಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶನಾಲಯಕ್ಕೆ ಚರ್ಚೆಯ ವಿಷಯಗಳ ಮಾಹಿತಿಯೊಂದಿಗೆ ಸ್ಪರ್ಧೆ ನಡೆಸುವ ಸ್ಥಳದ ವಿವರಗಳನ್ನು ಸ್ಪರ್ಧೆಯ ದಿನಾಂಕಕ್ಕಿಂತ ಹತ್ತು ದಿನಗಳ ಮೊದಲೇ ತಿಳಿಸತಕ್ಕದ್ದು.
10. **ಬಹುಮಾನಗಳು:–** ಈ ಮುಂದಿನ ಬಹುಮಾನಗಳನ್ನು ಇರಿಸಲಾಗಿದೆ:–
    - **(i)** ಸ್ಪರ್ಧೆಯಲ್ಲಿ ಪ್ರಥಮ ಸ್ಥಾನ ಗಳಿಸಿದ ಸಂಸ್ಥೆಗೆ ಪಾರಿತೋಷಕ (ಸಂಸದೀಯ ಪಾರಿತೋಷಕ).
    - **(ii)** ಅರ್ಹತೆಯ ಆಧಾರದ ಮೇಲೆ ಸ್ಪರ್ಧೆಯಲ್ಲಿನ ಉತ್ತಮ ಗುಣಮಟ್ಟದ ಪ್ರದರ್ಶನಕ್ಕಾಗಿ ಮೊದಲ ಐದು ಸ್ಥಾನ ಪಡೆದ ಸಂಸ್ಥೆಗಳಿಗೆ ಟ್ರೋಫಿಗಳು.
    - **(iii)** ಪ್ರತಿಯೊಂದು ಸಂಸ್ಥೆಯಿಂದ ಭಾಗವಹಿಸಿರುವ ವಿದ್ಯಾರ್ಥಿಗಳಿಂದ ಆಯ್ಕೆ ಮಾಡಲಾದವರಿಗೆ ಪದಕಗಳು/ಕಪ್ಪುಗಳು/ಪುಸ್ತಕಗಳ ರೂಪದಲ್ಲಿ ವೈಯಕ್ತಿಕ ಬಹುಮಾನಗಳು. ಬಹುಮಾನಗಳ ಒಟ್ಟು ಸಂಖ್ಯೆಯು 80ನ್ನು ಮೀರತಕ್ಕದ್ದಲ್ಲ.
    - **(iv)** ಇತರೆ ವೆಚ್ಚಗಳು.

**ಸೂಚನೆ:–** ಸಂಬಂಧಪಟ್ಟ ರಾಜ್ಯದ/ಕೇಂದ್ರಾಡಳಿತ ಪ್ರದೇಶದ ಸಂಸದೀಯ ವ್ಯವಹಾರಗಳ ಇಲಾಖೆ, ಸಾರ್ವಜನಿಕ ಶಿಕ್ಷಣ ನಿರ್ದೇಶನಾಲಯ ಸ್ಥಳೀಯ ಪರಿಸ್ಥಿತಿಗಳಿಗೆ ಅನುಸಾರವಾಗಿ ಮೇಲಿನ ನಾಲ್ಕು ಬಾಬುಗಳಿಗೆ ಸಂಬಂಧಿಸಿದ ವೆಚ್ಚವನ್ನು ವ್ಯತ್ಯಾಸಗೊಳಿಸಬಹುದು. ಭಾರತ ಸರ್ಕಾರದ ಸಂಸದೀಯ ವ್ಯವಹಾರಗಳ ಮಂತ್ರಾಲಯದಿಂದ ಮರುಸಂದಾಯವಾಗುವ ಗರಿಷ್ಠ ಮೊಬಲಗು ವಾರ್ಷಿಕವಾಗಿ ಯೋಜನೆಯ 15ನೇ ಕಂಡಿಕೆಯಲ್ಲಿ ಹೇಳಿರುವುದನ್ನು ಮೀರತಕ್ಕದ್ದಲ್ಲ.

ಪಾರಿತೋಷಕವು ಪರ್ಯಾಯ ಪಾರಿತೋಷಕವಾಗಿದ್ದು ಅದನ್ನು ಸ್ಪರ್ಧೆಯಲ್ಲಿ ಪ್ರಥಮ ಸ್ಥಾನವನ್ನು ಹೊಂದಿದ ಸಂಸ್ಥೆಯು ಒಂದು ವರ್ಷದವರೆಗೆ ಉಳಿಸಿಕೊಳ್ಳಬಹುದಾಗಿದೆ. ಆದಾಗ್ಯೂ, ಒಂದೇ ಸಂಸ್ಥೆಯು ಮೂರು ನಿರಂತರ ವರ್ಷಗಳು ಪಾರಿತೋಷಕವನ್ನು ಗೆದ್ದರೆ ಆ ಸಂಸ್ಥೆಯೇ ಅದನ್ನು ಖಾಯಂ ಆಗಿ ಇಟ್ಟುಕೊಳ್ಳುವುದು.

ಅನುಬಂಧ–II ರಲ್ಲಿ ಇದ್ದಂತೆ ಒಂದು ಪ್ರಮಾಣ ಪತ್ರವನ್ನು ಸ್ಪರ್ಧೆಯಲ್ಲಿ ಭಾಗವಹಿಸಿದ ಎಲ್ಲ ಸಂಸ್ಥೆಗಳಿಗೆ ನೀಡತಕ್ಕದ್ದು.

ಅನುಬಂಧ–III ರಲ್ಲಿ ಇದ್ದಂತೆ ಒಂದು ಪ್ರಮಾಣ ಪತ್ರವನ್ನು ಸ್ಪರ್ಧೆಯಲ್ಲಿ ವೈಯಕ್ತಿಕ ಬಹುಮಾನವನ್ನು ಪಡೆದ ಎಲ್ಲಾ ವಿದ್ಯಾರ್ಥಿಗಳಿಗೆ ನೀಡತಕ್ಕದ್ದು.

11. **ತೀರ್ಪುಗಾರರ ಸಮಿತಿ:–** ಪ್ರತಿಯೊಂದು ಸಂಸ್ಥೆಗಳ ಮೌಲ್ಯ ಮಾಪನಕ್ಕಾಗಿ ತೀರ್ಪುಗಾರರ ಸಮಿತಿಯನ್ನು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಹಾಗೂ ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯ ರಚಿಸತಕ್ಕದ್ದು ಹಾಗೂ ಅದರಲ್ಲಿ ಶಿಕ್ಷಣ ತಜ್ಞರು

ವಿಧಾನಸಭೆ/ಪರಿಷತ್ತಿನ ಸದಸ್ಯರು ಮತ್ತು ಸಂಸದೀಯ ಸಂಸ್ಥೆಗಳನ್ನು ನಡೆಸುವುದಕ್ಕೆ ಸಂಬಂಧಪಟ್ಟ ಇತರರನ್ನು ಒಳಗೊಂಡಿರಬಹುದು. ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯದ ಒಬ್ಬ ಅಧಿಕಾರಿಯು ಸಮಿತಿಯ ಪದನಿಮಿತ್ತ ಸದಸ್ಯರಾಗಿರತಕ್ಕದ್ದು.

12. **ಮೆರಿಟ್ ಪಟ್ಟಿಯನ್ನು ಸಿದ್ಧಪಡಿಸುವಾಗ ಪರಿಗಣಿಸಬೇಕಾದ ಅಂಶಗಳು:–** ಸ್ಪರ್ಧೆಯಲ್ಲಿ ಸಾಧನೆಯನ್ನು ನಿರ್ಧರಿಸುವಾಗ ಸಮಿತಿಯು, ಈ ಮುಂದಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡಿರತಕ್ಕದ್ದು.

13. **ಮರು ಪ್ರದರ್ಶನ:–** ಪ್ರತಿ ವರ್ಷದ ಸ್ಪರ್ಧೆಗಳ ಮುಕ್ತಾಯದ, ಸಂದರ್ಭದಲ್ಲಿ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ ಹಾಗೂ ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯ ನಿರ್ಧರಿಸಬಹುದಾದ ಸ್ಥಳ ಮತ್ತು ದಿನಾಂಕದಂದು ಸ್ಪರ್ಧೆಯ ಬಹುಮಾನ ವಿತರಣೆಯ ಸಮಾರಂಭದಲ್ಲಿ, ಸ್ಪರ್ಧೆಯಲ್ಲಿ ಪ್ರಥಮ ಸ್ಥಾನ ಗಳಿಸಿದ ಸಂಸ್ಥೆಯು ಮತ್ತೊಮ್ಮೆ ಪ್ರದರ್ಶನ ಮಾಡುವಂತೆ ಅಗತ್ಯಪಡಿಸಬಹುದು.

14. **ವರದಿ:–** ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯ ಸ್ಪರ್ಧೆಯು ಮುಗಿದ ಮೇಲೆ ಅನುಬಂಧ– ಙಗಿ ರಲ್ಲಿ ನಿಯಮಿಸಲಾದ ನಮೂನೆಯಲ್ಲಿ, ಅದರಲ್ಲಿ ಮೆರಿಟ್ ಆಧಾರದ ಮೇಲೆ, ಮೊದಲನೇ ಐದು ಸ್ಥಾನ ಪಡೆದ ಶಾಲೆಗಳೂ ಸೇರಿದಂತೆ ಭಾಗವಹಿಸಿದ ಎಲ್ಲಾ ಶಾಲೆಗಳ ಸಂಖ್ಯೆಯನ್ನು ಸೂಚಿಸಿ ವೈಯಕ್ತಿಕ ಬಹುಮಾನಗಳ ಸಂಖ್ಯೆ ಮುಂತಾದವುಗಳನ್ನು ಒಳಗೊಂಡ ಒಂದು ವರದಿಯನ್ನು ತಯಾರಿಸತಕ್ಕದ್ದು. ವರದಿಯನ್ನು ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯದ ಉಪ ನಿರ್ದೇಶಕರ ದರ್ಜೆಗಿಂತ ಕಡಿಮೆಯಲ್ಲದ ಪ್ರತಿನಿಧಿಯು ಸಹಿ ಮಾಡತಕ್ಕದ್ದು.

ನಿಯಮಿಸಲಾದ ನಮೂನೆಯಲ್ಲಿನ ವರದಿಯನ್ನು ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ, ಕರ್ನಾಟಕ ಸರ್ಕಾರ, ವಿಧಾನ ಸೌಧ, ಬೆಂಗಳೂರು ಇವರಿಗೆ ಕಳುಹಿಸತಕ್ಕದ್ದು.

**ಬಿ.ಜಿ. ಶ್ಯಾಮಲ**
ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

ಪಿ. ಆರ್. 1838

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯ 2010–11ನೇ ಸಾಲಿನ ಯೋಜನೆಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಬೆಂಗಳೂರು ಅವರ ಪತ್ರ ಸಂ:ಕಗ್ಯಾಇ/ಯೋಜನೆ/1/2010–11 ದಿನಾಂಕ 12–04–2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ: 12–04–2010ರ ಪತ್ರದಲ್ಲಿ ಮುಖ್ಯಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ರವರ ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯ 2010–11ನೇ ಸಾಲಿನಲ್ಲಿನ ಈ ಕೆಳಕಂಡ ಯೋಜನೆಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

| ಕ್ರ.ಸಂ. | ಹಮ್ಮಿಕೊಂಡಿರುವ ಯೋಜನೆಗಳು | ಆಯವ್ಯಯದಲ್ಲಿ ಒದಗಿಸಲಾದ ಅನುದಾನ (ಲಕ್ಷ ರೂ.ಗಳಲ್ಲಿ) |
|---|---|---|
| 1 | ದಕ್ಷಿಣ ಕನ್ನಡ ಜಿಲ್ಲಾ ಗ್ಯಾಸೆಟಿಯರ್ ಪರಿಷ್ಕೃತ ಕನ್ನಡ ಆವೃತ್ತಿಯ ಆಂಗ್ಲ ಭಾಷಾಂತರದ ಸಂಪಾದನೆ ಮತ್ತು ಪ್ರಕಟಣೆ | ರೂ. 3.00 |
| 2 | ಉಡುಪಿ ಜಿಲ್ಲಾ ಗ್ಯಾಸೆಟಿಯರ್ ಪರಿಷ್ಕೃತ ಕನ್ನಡ ಆವೃತ್ತಿಯ ಆಂಗ್ಲ ಭಾಷಾಂತರ – ಹೊರಗಿನ ವಿದ್ವಾಂಸರಿಗೆ ನೀಡಬೇಕಾದ ಸಂಭಾವನೆ. | ರೂ. 1.00 |
| 3 | ಎ ಹ್ಯಾಂಡ್ ಬುಕ್ ಆಫ್ ಕರ್ನಾಟಕ ಆಂಗ್ಲ ಆವೃತ್ತಿಯನ್ನು ಕನ್ನಡ ಭಾಷೆಗೆ ಭಾಷಾಂತರಿಸಿ ಕರ್ನಾಟಕ ಕೈಪಿಡಿಯನ್ನು ಬಹುವರ್ಣೀಯವಾಗಿ ಪ್ರಕಟಿಸುವುದು. | ರೂ. 6.00 |
| 4 | 1982–1983ರಲ್ಲಿ ಪ್ರಕಟಿಸಿದ್ದ ಕರ್ನಾಟಕ ರಾಜ್ಯ ಗ್ಯಾಸೆಟಿಯರ್ (ಎರಡು ಸಂಪುಟಗಳು) ಆಂಗ್ಲ ಆವೃತ್ತಿಯ ಪರಿಷ್ಕರಣೆ, ಇಂದೀಕರಣ ಹಾಗೂ ಮೂರು ಸಂಪುಟಗಳಲ್ಲಿ ಪ್ರಕಟಿಸಲು ಉದ್ದೇಶಿಸಿದೆ. | ರೂ. 5.50 |
| 5 | ದಾವಣಗೆರೆ ಜಿಲ್ಲಾ ಗ್ಯಾಸೆಟಿಯರ್ ಕನ್ನಡ ಆವೃತ್ತಿಯ ರಚನೆ, ಸಂಪಾದನೆ ಮತ್ತು ಪ್ರಕಟಣೆ. | ರೂ. 3.00 |
| 6 | ಇ – ಆಡಳಿತ ಯೋಜನೆಯಡಿ ಕಛೇರಿಯಲ್ಲಿರುವ ಗಣಕ ಯಂತ್ರಗಳನ್ನು ಬೈಬ್ಯಾಕ್ ಸ್ಕೀಮ್‌ನಲ್ಲಿ ಬದಲಾಯಿಸುವುದು. | ರೂ. 1.50 |

ಮೇಲೆ ಪ್ರಸ್ತಾಪಿಸಿರುವ ಕ್ರಮ ಸಂಖ್ಯೆ 1, 2, 3, 4 ಮತ್ತು 5ರಲ್ಲಿನ ಕಾಮಗಾರಿಗಳನ್ನು ಕೈಗೊಳ್ಳಲು ಆಡಳಿತಾತ್ಮಕ ಮಂಜೂರಾತಿ ನೀಡಲು ಸರ್ಕಾರವು ನಿರ್ಧರಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 23 ಕರಾಗೆ 2010, ಬೆಂಗಳೂರು, ದಿನಾಂಕ : 07–07–2010**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯ 2010–11ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಪ್ರಸ್ತಾಪಿಸಿರುವ ಈ ಕೆಳಕಂಡ ಯೋಜನೆಗಳಿಗೆ ಸರ್ಕಾರದ ಆಡಳಿತಾತ್ಮಕ ಅನುಮತಿಯನ್ನು ನೀಡಿದೆ.

| ಕ್ರ.ಸಂ. | ಹಮ್ಮಿಕೊಂಡಿರುವ ಯೋಜನೆಗಳು | ಆಯವ್ಯಯದಲ್ಲಿ ಒದಗಿಸಲಾದ ಅನುದಾನ (ಲಕ್ಷ ರೂ.ಗಳಲ್ಲಿ) |
|---|---|---|
| 1 | ದಕ್ಷಿಣ ಕನ್ನಡ ಜಿಲ್ಲಾ ಗ್ಯಾಸೆಟಿಯರ್ ಪರಿಷ್ಕೃತ ಕನ್ನಡ ಆವೃತ್ತಿಯ ಆಂಗ್ಲ ಭಾಷಾಂತರದ ಸಂಪಾದನೆ ಮತ್ತು ಪ್ರಕಟಣೆ | ರೂ. 3.00 |
| 2 | ಉಡುಪಿ ಜಿಲ್ಲಾ ಗ್ಯಾಸೆಟಿಯರ್ ಪರಿಷ್ಕೃತ ಕನ್ನಡ ಆವೃತ್ತಿಯ ಆಂಗ್ಲ ಭಾಷಾಂತರ – ಹೊರಗಿನ ವಿದ್ವಾಂಸರಿಗೆ ನೀಡಬೇಕಾದ ಸಂಭಾವನೆ. | ರೂ. 1.00 |
| 3 | ಎ ಹ್ಯಾಂಡ್ ಬುಕ್ ಆಫ್ ಕರ್ನಾಟಕ ಆಂಗ್ಲ ಆವೃತ್ತಿಯನ್ನು ಕನ್ನಡ ಭಾಷೆಗೆ ಭಾಷಾಂತರಿಸಿ ಕರ್ನಾಟಕ ಕೈಪಿಡಿಯನ್ನು ಬಹುವರ್ಣೀಯವಾಗಿ ಪ್ರಕಟಿಸುವುದು. | ರೂ. 6.00 |
| 4 | 1982–1983ರಲ್ಲಿ ಪ್ರಕಟಿಸಿದ್ದ ಕರ್ನಾಟಕ ರಾಜ್ಯ ಗ್ಯಾಸೆಟಿಯರ್ (ಎರಡು ಸಂಪುಟಗಳು) ಆಂಗ್ಲ ಆವೃತ್ತಿಯ ಪರಿಷ್ಕರಣೆ, ಇಂದೀಕರಣ ಹಾಗೂ ಮೂರು ಸಂಪುಟಗಳಲ್ಲಿ ಪ್ರಕಟಿಸಲು ಉದ್ದೇಶಿಸಿದೆ. | ರೂ. 5.50 |
| 5 | ದಾವಣಗೆರೆ ಜಿಲ್ಲಾ ಗ್ಯಾಸೆಟಿಯರ್ ಕನ್ನಡ ಆವೃತ್ತಿಯ ರಚನೆ, ಸಂಪಾದನೆ ಮತ್ತು ಪ್ರಕಟಣೆ. | ರೂ. 3.00 |
| | **ಒಟ್ಟು** | **ರೂ. 18.50** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–07–1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ. ಆರ್. 1839

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಮಲ್ಲೇಶಯ್ಯ, ಕೆ.ಎ.ಎಸ್. (ಕಿರಿಯ ಶ್ರೇಣಿ), ಹಿಂದಿನ ವಿಶೇಷ ಭೂ ಸ್ವಾಧೀನಾಧಿಕಾರಿ, ಬೀದರ್ ಇವರ ವಿರುದ್ಧದ ಶಿಸ್ತು ಕ್ರಮವನ್ನು ಕೈಬಿಡುವ ಕುರಿತು.

**ಓದಲಾಗಿದೆ :** 1) ದಿನಾಂಕ 12–06–2007ರ ನೋಟೀಸು ಸಂಖ್ಯೆ: ಸಿಆಸುಇ 060 ಎಸ್‌ಇಎನ್ 07.

2) ಶ್ರೀ ಮಲ್ಲೇಶಯ್ಯ, ಕೆ.ಎ.ಎಸ್. (ಕಿರಿಯ ಶ್ರೇಣಿ), ವಿಶೇಷ ಭೂ ಸ್ವಾಧೀನಾಧಿಕಾರಿ, ಹೇಮಾವತಿ ನಾಲಾ ವಲಯ, ತುಮಕೂರು ಇವರ ದಿನಾಂಕ: 01–02–2008ರ ಲಿಖಿತ ರಕ್ಷಣಾತ್ಮಕ ಹೇಳಿಕೆ.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನಲ್ಲಿ ಶ್ರೀ ಮಲ್ಲೇಶಯ್ಯ, ಕೆ.ಎ.ಎಸ್. (ಕಿರಿಯ ಶ್ರೇಣಿ), ಅಧಿಕಾರಿ ಇವರು ವಿಶೇಷ ಭೂ ಸ್ವಾಧೀನಾಧಿಕಾರಿ, ಬೀದರ್ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕಾರಂಜಾ ಯೋಜನೆಯ ಬಲದಂಡೆ ಕಾಲುವೆ ನಿರ್ಮಾಣಕ್ಕಾಗಿ ಭಾಲ್ಕಿ ತಾಲ್ಲೂಕಿನ ಕೆರೂರ ಮತ್ತು ಬಾಳೂರು ಗ್ರಾಮಗಳಲ್ಲಿನ ಕೆಲವು ಭೂ ಸ್ವಾಧೀನ ಪ್ರಕರಣಗಳಲ್ಲಿ ಶೇಕಡ 80 ರಷ್ಟು ಮುಂಗಡ ಪರಿಹಾರ ಧನವನ್ನು ನಿಯಮಬಾಹಿರವಾಗಿ ವಿತರಿಸಿರುವಲ್ಲಿ ಎಸಗಿರುವ ಕರ್ತವ್ಯ ಲೋಪ ಹಾಗೂ ದುರ್ನಡತೆ ಕುರಿತಂತೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11 ರಡಿ ದೋಷಾರೋಪಣ ಪಟ್ಟಿಯನ್ನು ಜಾರಿಗೊಳಿಸಿ ಶಿಸ್ತು ಕ್ರಮವನ್ನು ಪ್ರಾರಂಭಿಸಲಾಯಿತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಶ್ರೀ ಮಲ್ಲೇಶಯ್ಯ ರವರು ಲಿಖಿತ ರಕ್ಷಣಾತ್ಮಕ ಹೇಳಿಕೆ ಸಲ್ಲಿಸಿ, ಯೋಜನೆಯು ಕಾಲಮಿತಿ ಯೋಜನೆಯಾಗಿದ್ದು, ತ್ವರಿತಗತಿಯಲ್ಲಿ ಭೂ ಸ್ವಾಧೀನ ಪ್ರಕ್ರಿಯೆ ಮುಗಿಸಬೇಕಿತ್ತೆಂದು ಶೇಕಡ 80 ರಷ್ಟು ಪರಿಹಾರಧನ ನೀಡದಿದ್ದಲ್ಲಿ ಕಾಮಗಾರಿ ನಡೆಸಲು ಅಡಚಣೆ ಮಾಡುವುದಾಗಿ ಸಂತ್ರಸ್ಥ ರೈತರು ಲಿಖಿತ ಮನವಿ ಸಲ್ಲಿಸಿದ್ದು, ಕಾನೂನು ಸುವ್ಯವಸ್ಥೆಯ ದೃಷ್ಠಿಯಿಂದ ಶೇಕಡ 80 ರಷ್ಟು ಪರಿಹಾರ ಧನವನ್ನು ಪಾವತಿಸಲು ಅವಕಾಶ ಇರುವುದರಿಂದಲೂ, ಉಪ ನೋಂದಣಾಧಿಕಾರಿಯವರ ಮಾರುಕಟ್ಟೆ ದರವನ್ನು ನಿಗಧಿಪಡಿಸಿ ಯೋಜನೆಯ ಯಶಸ್ವೀ ಅನುಷ್ಠಾನದ ಹಿತದೃಷ್ಠಿಯಿಂದ ಶೇಕಡ 80 ರಷ್ಟು ಪರಿಹಾರಧನ ಮುಂಗಡವಾಗಿ ವಿತರಿಸಲಾಗಿದೆ. ಇದರಲ್ಲಿ ಯಾವುದೇ ನಿಯಮಗಳ ಉಲ್ಲಂಘನೆಯಾಗಿರುವುದಿಲ್ಲವೆಂದು ತಿಳಿಸುತ್ತಾ, ಸಮಜಾಯಿಷಿಯನ್ನು ಒಪ್ಪಿಕೊಂಡು ತನ್ನ ವಿರುದ್ಧದ ಶಿಸ್ತು ಕ್ರಮವನ್ನು ಕೈಬಿಡುವಂತೆ ಮನವಿ ಮಾಡಿರುತ್ತಾರೆ. ಶ್ರೀ ಮಲ್ಲೇಶಯ್ಯ ಇವರ ರಕ್ಷಣಾತ್ಮಕ ಹೇಳಿಕೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಕಂದಾಯ ಇಲಾಖೆಯ ಅಭಿಪ್ರಾಯ ಪಡೆದು, ಸರ್ಕಾರವು, ಸದರಿಯವರು ಸಲ್ಲಿಸಿದ ರಕ್ಷಣಾತ್ಮಕ ಹೇಳಿಕೆಯನ್ನು ಅಂಗೀಕರಿಸುತ್ತಾ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 017 ಕೆಇವಿ 08, ಬೆಂಗಳೂರು, ದಿನಾಂಕ : 29ನೇ ಜೂನ್, 2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು, ಶ್ರೀ ಮಲ್ಲೇಶಯ್ಯ, ಕೆ.ಎ.ಎಸ್. (ಕಿರಿಯ ಶ್ರೇಣಿ), ಅಂದಿನ ವಿಶೇಷ ಭೂ ಸ್ವಾಧೀನಾಧಿಕಾರಿ, ಬೀದರ್ (ಪ್ರಸ್ತುತ ವಿಶೇಷ ಭೂ ಸ್ವಾಧೀನಾಧಿಕಾರಿ, ಹೇಮಾವತಿ ನಾಲಾ ವಲಯ, ತುಮಕೂರು ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ) ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ

11 ರಡಿ ದೋಷಾರೋಪಣ ಪಟ್ಟಿಯೊಂದಿಗೆ ದಿನಾಂಕ: 12-06-2007 ರಂದು ಜಾರಿಗೊಳಿಸಿದ ನೋಟೀಸಿಗೆ ಇವರು ದಿನಾಂಕ: 01-02-2008 ರಂದು ಸಲ್ಲಿಸಿದ ಲಿಖಿತ ರಕ್ಷಣಾತ್ಮಕ ಹೇಳಿಕೆಯನ್ನು ಅಂಗೀಕರಿಸಿ, ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಡಲು ನಿರ್ಣಯಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಶ್ರೀಯುತರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2)

ಪಿ. ಆರ್. 1840

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಚ್.ಎನ್. ಹೊನ್ನಪ್ಪ, ಪಿ.ಎಸ್.ಐ., ಆಗುಂಬೆ ಪೋಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೋಲೀಸ್ ಅಧೀಕ್ಷಕರು, ದಾವಣಗೆರೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ (5)ಇವಿ/ಪಿಆರ್/31/2009 ಓ.ಬಿ: 329/09 ದಿನಾಂಕ 20-04-2009.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೋಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ: 07/ಅಪೀಲು/ಸಿಬ್ಬಂದಿ-2/2009-10 ಓ.ಬಿ. 44/2009-10 ದಿನಾಂಕ 25-09-2009.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 31-10-2009.
4) ಮಹಾ ನಿರ್ದೇಶಕರು ಮತ್ತು ಅರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)56/2009-10 ದಿನಾಂಕ 05-01-2010.
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 9 ಸಿಎನ್‌ಎಸ್ 10 ದಿನಾಂಕ 10-06-2010.

**ಪ್ರಸ್ತಾವನೆ :**

ಶ್ರೀ ಎಚ್.ಎನ್. ಹೊನ್ನಪ್ಪ, ಪಿ.ಎಸ್.ಐ., ಇವರು ದಾವಣಗೆರೆ ಗ್ರಾಮಾಂತರ ಪೋಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿತನ ತೋರಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

> "ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಮಾಹೆ 01/2009ರಲ್ಲಿ ಸ್ವೀಕೃತವಾದ ನಾನ್ ಬೇಲೆಬಲ್ ವಾರೆಂಟ್‌ಗಳ ಮಾಹಿತಿಯನ್ನು ದಿನಾಂಕ 12-02-2009 ರಂದು ಜಿಲ್ಲಾ ಪೊಲೀಸ್ ಕಛೇರಿಯಲ್ಲಿ ನಡೆಸಲಾದ ಮಾಸಿಕ ಅಪರಾಧ ಸಭೆಗೆ ನೀಡದೇ ಹಾಗೂ ನಿಮ್ಮ ಮೇಲಾಧಿಕಾರಿಗಳಿಗೆ 01-2009ರ ಮಾಹೆಯಲ್ಲಿ ಯಾವುದೇ ಎನ್‌ಬಿಡಬ್ಲ್ಯೂ ನ್ಯಾಯಾಲಯದಿಂದ ಸ್ವೀಕೃತವಾಗಿರುವುದಿಲ್ಲವೆಂದು ಸುಳ್ಳು ಮಾಹಿತಿ ನೀಡಿ ನಿಮ್ಮ ಕರ್ತವ್ಯದಲ್ಲಿ ಶಿಸ್ತಿನ ಇಲಾಖೆ ಪೊಲೀಸ್ ಅಧಿಕಾರಿಗೆ ಸಲ್ಲದ ಘೋರ ದುರ್ನಡತೆಯನ್ನು ಹಾಗೂ ಅತೀವ ಕರ್ತವ್ಯ ನಿರ್ಲಲಕ್ಷ್ಯತನ ಮತ್ತು ಘೋರ ಬೇಜವಾಬ್ದಾರಿತನ ಪ್ರದರ್ಶಿಸಿದ ಆರೋಪಗಳು."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 20-04-2009ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಧಕ್ಕೆಯಾಗದಂತೆ ಒಂದು ವರ್ಷಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ 25-09-2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಶಿಸ್ತು ಪ್ರಾಧಿಕಾರದ ದಂಡನೆಯನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಕರ್ನಾಟಕ ಲೋಕಸೇವಾ ಆಯೋಗವನ್ನು ಸಮಾಲೋಚಿಸಿದ್ದು. ಸರ್ಕಾರವು ಪ್ರಸ್ತಾಪಿಸಿರುವ ದಂಡನೆಯು ಲಘುವಾಗಿ ಕಂಡು ಬಂದಿರುವುದರಿಂದ ಶಿಸ್ತು ಪ್ರಾಧಿಕಾರದ ದಂಡನೆಗೆ ಸಹಮತಿ ಸೂಚಿಸಿದ ಹಿನ್ನೆಲೆಯಲ್ಲಿ ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 197 ಪೊಸಿಅ 2009, ಬೆಂಗಳೂರು, ದಿನಾಂಕ : 9ನೇ ಜುಲೈ, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963 ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಚ್.ಎನ್. ಹೊನ್ನಪ್ಪ, ಪಿ.ಎಸ್.ಐ., ಆಗುಂಬೆ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ. ಆರ್. 1841

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಕೋಲಾರ ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ–1) ಗೆ ಸರ್ಕಾರದ ಅಂತಿಮ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ನಅಇ 543 ಮೈಅಪ್ರಾ 2007, ದಿನಾಂಕ : 23–10–2007.
2. ಕೋಲಾರ ನಗರ ಯೋಜನಾ ಪ್ರಾಧಿಕಾರದ ಪತ್ರ ಸಂಖ್ಯೆ : ಕೋನಪ್ರಾ/ ವ್ಯಾ.ಅ.ಯೋ/ಅಂತಿಮ/24/2010–11, ದಿನಾಂಕ : 29–4–2010.
3. ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಏಕ ಕಡತ ಸಂಖ್ಯೆ : ನಗ್ರಾಯೋ (22)/ಉನಿ (ಯೋವಿ)ಕೋಲಾರ/ಮಯೋ(ಪ–1)2010–11, ದಿನಾಂಕ : 29–6–2010 ರಲ್ಲಿ ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕೋಲಾರ ನಗರ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ಪರಿಷ್ಕೃತ–1) ತಾತ್ಕಾಲಿಕ ಅನುಮೋದನೆ ನೀಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕೋಲಾರ ನಗರಾಭಿವೃದ್ಧಿ ಪ್ರಾಧಿಕಾರವು ಕೋಲಾರ ನಗರದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆ (ಪರಿಷ್ಕೃತ–1) ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1) ರನ್ವಯ ಅಗತ್ಯ ಕ್ರಮ ಜರುಗಿಸಿ ಮಹಾ ಯೋಜನೆಯ ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ ಸರ್ಕಾರದ ಅಂತಿಮ ಅನುಮೋದನೆಗೆ ಸಲ್ಲಿಸಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತದಲ್ಲಿ ಕೋಲಾರ ನಗರ ಜನಸಂಖ್ಯೆಯು 2021 ರಲ್ಲಿ 2,30,000 ಗಳಷ್ಟು ಬೆಳವಣಿಗೆಯಾಗುವುದಾಗಿ ಅಂದಾಜಿಸಿ, ಮಹಾ ಯೋಜನೆಯನ್ನು ತಯಾರಿಸಲಾಗಿದೆ. ಕೋಲಾರ ನಗರದ ಸ್ಥಳೀಯ ಯೋಜನಾ ಪ್ರದೇಶದ 6995.00 ಹೆಕ್ಟೇರ್ ಪ್ರದೇಶದಲ್ಲಿ 2044.55 ಹೆಕ್ಟೇರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 12 ರಲ್ಲಿನ ಅಂಶಗಳನ್ನು ಪರಿಗಣಿಸಿ, ನಗರದ ಮುಂದಿನ ಯೋಜಿತ ಬೆಳವಣಿಗೆಗಳಿಗಾಗಿ ಪ್ರಸ್ತಾಪಿಸಿರುವ 2044.55 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 1038.38 ಹೆಕ್ಟೇರ್ (ಶೇ 50.79), ವಾಣಿಜ್ಯಕ್ಕಾಗಿ 78.61 ಹೆಕ್ಟೇರ್ (ಶೇ. 0384), ಕೈಗಾರಿಕೆಗಾಗಿ 155.14 ಹೆಕ್ಟೇರ್ (ಶೇ. 7.59), ಸಾರ್ವಜನಿಕ/ಅರೆ ಸಾರ್ವಜನಿಕ ಉಪಯೋಗಕ್ಕೆ 156.98 ಹೆಕ್ಟೇರ್ (ಶೇ. 7.67), ಉದ್ಯಾನವನ/ ಬಯಲು ಜಾಗಗಳಿಗೆ 252.46 ಹೆಕ್ಟೇರ್ (ಶೇ. 12.36), ಸಾರ್ವಜನಿಕ ಉಪಯುಕ್ತತೆಗಾಗಿ 11.78 ಹೆಕ್ಟೇರ್ (ಶೇ. 0.57) ಹಾಗೂ ಸಾರಿಗೆ/ಸಂಪರ್ಕ ವಲಯಕ್ಕೆ 351.20 ಹೆಕ್ಟೇರ್ (ಶೇ. 17.18) ಪ್ರದೇಶವನ್ನು ನಿಗದಿಪಡಿಸಲಾಗಿದೆ ಮಹಾ ಯೋಜನೆ (ಪರಿಷ್ಕೃತ–1) ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ರ ಕಲಂ 13(3) ರನ್ವಯ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ನಅಇ 208 ಬೆಂರೂಪ್ರಾ 2010, ಬೆಂಗಳೂರು, ದಿನಾಂಕ : 9–8–2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೋಲಾರ ನಗರದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆ (ಪರಿಷ್ಕೃತ–1) ನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ರ ಕಲಂ 13(3) ರನ್ವಯ ಅಂತಿಮ ಅನುಮೋದನೆಯನ್ನು ನೀಡಲಾಗಿದೆ.

ಮಹಾ ಯೋಜನೆ (ಪರಿಷ್ಕೃತ–1) ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಎಂ.ಎಂ. ಹಿರೇಮಠ)**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

## ಕೋಲಾರ ನಗರದ ಮಹಾಯೋಜನೆ (ಪರಿಷ್ಕೃತ–1) ಅಂತಿಮ ಅಂಕಿ ಅಂಶಗಳ ಸ್ಥೂಲ ನೋಟ

| ಕ್ರ.ಸಂ. | ಪರಿಶೀಲಿಸಬೇಕಾದ ವಿವರಗಳು | ವಿವರಣೆ |
|---|---|---|
| 1 | ಸ್ಥಳೀಯ ಯೋಜನಾ ಪ್ರದೇಶವನ್ನು ಸರ್ಕಾರವು ಘೋಷಿಸಿರುವ ವಿವರಗಳು | ಆದೇಶ ಸಂಖ್ಯೆ : ಹೆಚ್‌ಎಂವಿ : 8 : ಟಿಟಿಪಿ : 77, ದಿನಾಂಕ : 22–7–1977 |
| 2 | ಸ್ಥಳೀಯ ಯೋಜನಾ ಪ್ರದೇಶದ ವಿಸ್ತೀರ್ಣ | 69.95 ಚ.ಕಿ.ಮೀ. |
| 3 | ಕೆ.ಟಿ.ಸಿಪಿ. ಕಾಯ್ದೆಯಡಿಯಲ್ಲಿ ಕಲಂ 13(1) ರಂತೆ ಕ್ರಮ | ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ : 13–12–2007 ರಂದು ಪ್ರಕಟಿಸಿದೆ |
| 4 | 2001 ಜನಗಣತಿಯಂತೆ ಸದರಿ ಪಟ್ಟಣದ ಜನಸಂಖ್ಯೆ | 1,13,907 |
| 5 | 2021 ಕ್ಕೆ ಪ್ರಸ್ತಾಪಿಸಲಾದ ಜನಸಂಖ್ಯೆ | 2,30,000 |
| 6 | ಪ್ರತಿ 10 ವರ್ಷಕ್ಕೊಮ್ಮೆ ಜನಸಂಖ್ಯೆ ಹೆಚ್ಚಳ ಪ್ರಮಾಣ | 36.88% |
| 7 | ಪ್ರತಿ ಹೆಕ್ಟೇರಿಗೆ ಪರಿಗಣಿಸಲಾದ ಜನಸಾಂದ್ರತೆ | 113 pph |
| 8 | ಅಭಿವೃದ್ಧಿ ಹೊಂದಿರುವ ಒಟ್ಟು ಪ್ರದೇಶ | 933.62 ಹೆಕ್ಟೇರ್ |

| | | |
|---|---|---|
| 9 | ನಗರೀಕರಣ ಎಲ್ಲೆಯವರೆಗೆ ಪ್ರಸ್ತಾಪಿಸಲಾದ ಒಟ್ಟು ವಿಸ್ತೀರ್ಣ | 2044.55 ಹೆಕ್ಟೇರ್ |
| 10 | ಸರ್ಕಾರದಿಂದ ಮಹಾ ಯೋಜನೆಗೆ ಅಂತಿಮ ಅನುಮೋದನೆಗೊಂಡಿರುವ ಬಗ್ಗೆ ವಿವರಗಳು | ಸಂಖ್ಯೆ : ಹೆಚ್‌ಯುಡಿ 18 ಟಿಟಿಪಿ 95,<br>ದಿನಾಂಕ : 7–3–1996 |
| 11 | ವರದಿಯಲ್ಲಿ ಈ ಕೆಳಕಂಡ ಅಂಶಗಳ ಬಗ್ಗೆ ಮಾಹಿತಿಯನ್ನು ಅಳವಡಿಸಲಾಗಿದೆ.<br>ಅ) ಭೂಕಂಪದ ಕುರಿತು (Safety measure against earth quake)<br>ಆ) ಅಂಗವಿಕಲರಿಗೆ ಸೌಲಭ್ಯಗಳನ್ನು ಒದಗಿಸುವ ಕುರಿತು (Facility for Physically Handicapped)<br>ಇ) ಮಳೆ ನೀರು ಸಂಗ್ರಹಣೆ ಕುರಿತು (Rain Water Harvesting)<br>ಈ) ಸೂರ್ಯಕಿರಣಗಳಿಂದ ನೀರು ಕಾಯಿಸುವ ಕುರಿತು (Solar water heater) | <br>ಅಳವಡಿಸಿದೆ<br><br>ಅಳವಡಿಸಿದೆ<br>ಅಳವಡಿಸಿದೆ<br>ಅಳವಡಿಸಿದೆ |
| 12 | ಭೂ ಬಳಕೆ ವಿವರಗಳು (ನಕ್ಷೆಗಳನ್ನು ಲಗತ್ತಿಸಿದೆ) | |

| ಕ್ರ.ಸಂ. | ಭೂ ಉಪಯೋಗ | ಹಾಲಿ ಭೂ ಬಳಕೆ 2007 (ಹೆಕ್ಟೇರ್‌ಗಳಲ್ಲಿ) | | ಉದ್ದೇಶಿತ ಭೂ ಬಳಕೆ 2021 (ಹೆಕ್ಟೇರ್‌ಗಳಲ್ಲಿ) | |
|---|---|---|---|---|---|
| | | ವಿಸ್ತೀರ್ಣ (ಹೆ) | % | ವಿಸ್ತೀರ್ಣ (ಹೆ) | % |
| 1 | ವಸತಿ | 274.23 | 29.38 | 1038.38 | 50.79 |
| 2 | ವಾಣಿಜ್ಯ | 25.50 | 2.75 | 78.61 | 3.84 |
| 3 | ಕೈಗಾರಿಕೆ | 41.56 | 4.45 | 155.14 | 7.59 |
| 4 | ಸಾರ್ವಜನಿಕ/ಅರೆ ಸಾರ್ವಜನಿಕ | 69.07 | 7.40 | 156.98 | 7.67 |
| 5 | ಉದ್ಯಾನವನ/ಆಟದ ಮೈದಾನ/ಬಯಲು ಪ್ರದೇಶ | 24.47 | 2.62 | 252.46 | 12.36 |
| 6 | ಸಾರ್ವಜನಿಕ ಉಪಯುಕ್ತತೆ | 10.69 | 1.14 | 11.78 | 0.57 |
| 7 | ಸಾರಿಗೆ ಮತ್ತು ಸಂಚಾರ | 257.24 | 27.55 | 351.20 | 17.18 |
| | **ಒಟ್ಟು** | | | **20.44.55** | **100.00** |
| 8 | ಖಾಲಿ ಜಾಗ | 226.40 | 24.24 | – | |
| 9 | ಜಲಾವೃತ ಪ್ರದೇಶ | 4.46 | 0.47 | 346.40 | |
| 10 | ವ್ಯವಸಾಯದ ಜಮೀನು | – | – | 4604.05 | |
| | ಒಟ್ಟು | **933.62** | **100** | **6995.00** | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಎಂ.ಎಂ. ಹಿರೇಮಠ)**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

ಪಿ. ಆರ್. 2233

## ಸಹಕಾರ ಸಚಿವಾಲಯ

**ವಿಷಯ :** ದಿನಾಂಕ : 30–9–2010 ರೊಳಗೆ ನಡೆಸಬೇಕಾಗಿರುವ ಎಲ್‌ಆರ್‌ಡಿಇ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ ಆಡಳಿತ ಸಮಿತಿಯ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸಿಒ 22 ಸಿಎಲ್‌ಎಂ 2010, ದಿನಾಂಕ : 9–2–2010.

2. ಕಾರ್ಯದರ್ಶಿ, ಎಲ್‌ಆರ್‌ಡಿಇ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇವರ ಪತ್ರ ಸಂಖ್ಯೆ : ಎಲ್.ಆರ್.ಡಿ.ಇ. : ಹೆಚ್‌ಸಿಎಸ್/ಚುನಾವಣೆ/59/2010–11, ದಿನಾಂಕ : 10–8–2010.

**ಪ್ರಸ್ತಾವನೆ :**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(2) ರಡಿ ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಎಲ್‌ಆರ್‌ಡಿಇ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ ಆಡಳಿತ ಸಮಿತಿಯ ಚುನಾವಣೆಯನ್ನು ದಿನಾಂಕ : 30–9–2010 ರಂದು ಮುಂದೂಡಿ ಆದೇಶ ಹೊರಡಿಸಲಾಗಿದೆ. ಮೇಲೆ ಓದಲಾದ (2) ರ ಅಧ್ಯಕ್ಷರ ಪತ್ರದಲ್ಲಿ ಮೇಲ್ಕಂಡ ಸಹಕಾರ ಸಂಘ ನಿಯಮಿತ ಇದರ ತಂತ್ರಜ್ಞರು ಮತ್ತು ವಿಜ್ಞಾನಿಗಳು ರಾಷ್ಟ್ರಾದ್ಯಂತ ಅನೇಕ ಕಾರ್ಯಕ್ರಮಗಳು ಇರುವುದರಿಂದ ಚುನಾವಣೆಯನ್ನು ದಿನಾಂಕ : 31–3–2011 ರವರೆಗೆ ಮುಂದೂಡಲು ಕೋರಿರುತ್ತಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಸಿಒ 152 ಸಿಎಲ್‌ಎಂ 2010, ಬೆಂಗಳೂರು, ದಿನಾಂಕ : 13–8–2010.**

ಮೇಲಿನ ಪರಿಸ್ಥಿತಿಯಲ್ಲಿ ಎಲ್‌ಆರ್‌ಡಿಇ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(4) ಮತ್ತು 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ

ಅಧಿನಿಯಮದ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39(ಎಫ್) ಅನ್ನು ಮಾರ್ಪಾಟು ಮಾಡಿ ಸದರಿ ಸಂಘದ ಆಡಳಿತ ಸಮಿತಿಗೆ ಚುನಾವಣೆಯನ್ನು ದಿನಾಂಕ : 31–3–2011ರೊಳಗೆ ನಡೆಸುವಂತೆ ಆದೇಶಿಸುತ್ತದೆ.

ಸೂಚನೆ : ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2) ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ : 31–3–2011 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶ ಮೂಲಕ ಮಾರ್ಪಾಡು ಮಾಡುವಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಆರ್.ಎಸ್. ನೂಲಿ)**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ

ಪಿ. ಆರ್. 2234

## ಸಹಕಾರ ಸಚಿವಾಲಯ

**ವಿಷಯ :** ದಿನಾಂಕ : 30–9–2010 ರೊಳಗೆ ನಡೆಸಬೇಕಾಗಿರುವ ಕರ್ನಾಟಕ ದೂರ ಸಂಪರ್ಕ ಇಲಾಖೆ ನೌಕರರ ಸಹಕಾರ ಸಂಘ ನಿ., ಬೆಂಗಳೂರು ಇದರ ಆಡಳಿತ ಸಮಿತಿಯ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಿಒ 219 ಸಿಎಲ್ಎಂ 2010, ದಿನಾಂಕ : 8–1–2010.
2. ಅಧ್ಯಕ್ಷರು, ಕರ್ನಾಟಕ ದೂರ ಸಂಪರ್ಕ ಇಲಾಖೆ ನೌಕರರ ಸಹಕಾರ ಸಂಘ ನಿ., ಬೆಂಗಳೂರು ಇವರ ಪತ್ರ ದಿನಾಂಕ : 1–8–2010.

**ಪ್ರಸ್ತಾವನೆ :**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(2) ರಡಿ ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ದೂರ ಸಂಪರ್ಕ ಇಲಾಖೆ ನೌಕರರ ಸಹಕಾರ ಸಂಘ ನಿ., ಬೆಂಗಳೂರು ಇದರ ಆಡಳಿತ ಸಮಿತಿಯ ಚುನಾವಣೆಯನ್ನು ದಿನಾಂಕ : 30–9–2010 ರಂದು ಮುಂದೂಡಿ ಆದೇಶ ಹೊರಡಿಸಲಾಗಿದೆ. ಮೇಲೆ ಓದಲಾದ (2) ರ ಅಧ್ಯಕ್ಷರ ಪತ್ರದಲ್ಲಿ ಮೇಲ್ಕಂಡ ಸಹಕಾರ ಸಂಘವು ಮೈಸೂರು ಮತ್ತು ಬೆಂಗಳೂರಿನಲ್ಲಿ ವಿವಿಧ ಬಡಾವಣೆಗಳನ್ನು ನಿರ್ಮಿಸಿದ್ದು ಸದರಿ ನಿವೇಶನಗಳನ್ನು ಶೇರುದಾರರಿಗೆ ಹಂಚಿಕೆ ಮಾಡಲು ಅನುವಾಗುವಂತೆ ಆಡಳಿತ ಸಮಿತಿಯ ಚುನಾವಣೆಯನ್ನು ದಿನಾಂಕ : 31–3–2011 ರವರೆಗೆ ಮುಂದೂಡಲು ಅನುಮತಿ ಕೋರಿರುತ್ತಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಸಿಒ 154 ಸಿಎಲ್ಎಂ 2010, ಬೆಂಗಳೂರು, ದಿನಾಂಕ : 13–8–2010.**

ಮೇಲಿನ ಪರಿಸ್ಥಿತಿಯಲ್ಲಿ ಕರ್ನಾಟಕ ದೂರ ಸಂಪರ್ಕ ಇಲಾಖೆ ನೌಕರರ ಸಹಕಾರ ಸಂಘ ನಿ., ಬೆಂಗಳೂರು ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(4) ಮತ್ತು 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39(ಎಫ್) ಅನ್ನು ಮಾರ್ಪಾಟು ಮಾಡಿ ಸದರಿ ಸಂಘದ ಆಡಳಿತ ಸಮಿತಿಗೆ ಚುನಾವಣೆಯನ್ನು ದಿನಾಂಕ : 31–3–2011ರೊಳಗೆ ನಡೆಸುವಂತೆ ಆದೇಶಿಸುತ್ತದೆ.

ಸೂಚನೆ : ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2) ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ : 31–3–2011 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶ ಮೂಲಕ ಮಾರ್ಪಾಡು ಮಾಡುವಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಆರ್.ಎಸ್. ನೂಲಿ)**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ

ಪಿ. ಆರ್. 2235

## INFRASTRUCTURE DEVELOPMENT SECRETARIAT

**Sub :** Development of SH-132 on PPP basis.

**Ref :** G.O. No. ID 115 ITS 2008, dt. 17-7-2009.

**PREAMBLE :**

SH-132 in the District of Bellary connects the State of Andhra Pradesh and Karnataka & passes through the proposed Greenfield Airport at Sanganakallu. The project road stretch of 25.17 kms provides access to the Greenfield airport at Bellary & serves as gateway to tourism location of world heritage site at HAMPI and also to the State border.

2. The following actions have been initiated in the direction of project development and its implementation :-

a) KSHIP was appointed as nodal agency, iDeCK as transaction advisor and M/s Scotwilson as the technical consultant.

b) Tenders were invited through-e-procurement platform under single stage 2 cover system of bidding.

c) A letter was addressed to DEA seeking sanction of VGF. However, based on the traffic study and the estimated cost, the DEA did not accept the proposal. Accordingly, the proposal was modified to 4 laning of SH-132 from Bellary city to airport, 2 laning upto AP border and resurface of road in AP limits. It was advised by the DEA to tackle the stretch of the road upto the State border only. A. VGF of 20% amounting to Rs. 33.46 crores was granted by DEA, and the remaining Rs. 15.54 crores was to be met out of State funds. The proposal was based on tolling of the Road and accordingly, tenders were again invited for the revised proposal under a single stage 2 cover system bidding process.

d) On the due date of the bid, there was no response to the tender.

e) Hence, it was decided to take forward the project by through the Annuity framework, with a revised total cost of the project of Rs. 158.00 crores.

3. Tenders were invited through the e-procurement portal by uploading RFP to the website. A pre-bid meeting was also held and the last date for submission of the bids was 26-6-2010. In response to this, 13 bidders participated of which one bid not qualify as the bidder had not uploaded the documents in the e-portal.

4. A Tender Scrutiny Committee (TSC) was constituted to take up the evaluation of the bids vide G.O. No. IDD 115 ITS 2008, dated 25-6-2010. The TSC has evaluated 12 bids and based on the evaluation, the offer of M/s SEW Infrastructure Ltd., is found to be the best offer indicating an annuity of Rs. 12.60 crores (Twelve Crores sixty lakhs only) payable biannually for the entire concession period excluding the construction period. The TSC has recommended to Govt to accept the offer of M/s SEW Infrastructure Ltd., amounting to Rs. 12.60 crores payable biannually for the entire concession period of 15 years excluding the construction period. The proposal has been examined in detail at the Government level and hence this order.

**GOVERNMENT ORDER NO. IDD 115 ITS 2008, BANGALORE DATED: 12-8-2010.**

The State Government, after careful consideration of the above mentioned circumstances, is pleased to :-

1) Ratify the various actions taken to promote the project under Annuity route.

2) Take forward the project of development of SH-132 under Annuity route/ framework.

3) Accept the offer of M/s SEW Infrastructure Ltd., amounting to Rs. 12.60 crores payable biannually and the payment would commence from COD. The first Annuity payment date shall be the date falling after 6 calendar months from COD.

4) Issue Letter of Award to M/s SEW Infrastructure Ltd., to implement the project.

By Order and in the name of the Governor of Karnataka,

**(R. Shivalingaiah)**

Under Secretary to Govt. PPP Cell,

Infrastructure Development Department.

P.R.2236

## INFRASTRUCTURE DEVELOPMENT SECRETARIAT

**Sub :** Selection of Technical Consultant for preparation of DPR of Mono Rail/ LRT project in Bangalore-Constitution of Tender Scrutiny Committee.

**Read :** 1. The Karnataka Transparency in Public Procurement Rules 2000.

**2.** G.O. No. ನ.ಅ.ಇ. 320. ಬಿ.ಎಂ.ಆರ್. 2008, dated 3-4-2009.

**PREAMBLE :**

In the G.O. dated 3-4-2009 read at Sl.No. (2) above, sanction has been accorded appointing BARL as special purpose vehicle to undertake the MonoRail projects in Bangalore and any part of the State subject to certain conditions mentioned therein.

As per the said Government order, BARL has taken the role of a nodal agency to under take the procurement activities to procure consultancy to prepare DPR for the MonoRail/LRT systems and BARL has invited bids in the Local dailies for selection of a technical consultant indicating the schedule of bidding as hereunder ;

i) Bid due date : 16-8-2010 by 1600 hours IST

ii) Technical Bid opening date : 16-8-2010 by 1700 hours IST

In terms of Karnataka Transparency in Public Procurement Rules 2000, the tender accepting authority is required to appoint the "Tender Scrutiny Committee" to undertake evaluation of the bids received for there financial capacity and to advise the Tender accepting authority/Procurement entiry about the preferred bidder. Accordingly, it is proposed to constitute a Tender Scrutiny Committee as required under the KTPP Act.

Hence this order.

**GOVERNMENT ORDER NO. IDD 90 ITS 2010, BANGALORE DATED: 16-8-2010.**

In the circumstances, explained in the preamble, a Tender Scrutiny Committee (TSC) is constituted to undertake the scrutiny of bids received with the following members :

Shri C. Jayaram-Director (Tech), BARL, Khanija Bhavan, Bangalore.

Shri K.L. Lokanatha-Director PPP cell Vikasa Soudha, Bangalore.

Shri Rabindra K Sahu-PPP Expert PPP cell

Shri Hiremath-Executive Engineer, BARL, Khanija Bhavan, Bangalore.

2. The Tender Scrutiny Committee shall carry out scrutiny of the tenders strictly in accordance with evaluation criteria indicated in RFP document and in accordance with the provisions contained in the KTPP Act and rules.

3. The Tender scrutiny committee will seal and witness all the bids received in physical mode and open the same publicly on the due dates.

4. The Tender Scrutiny Committee shall ensure the confidentiality of the process of tender evaluation.

By Order and in the name of the Governor of Karnataka,

**(R. Shivalingaiah)**

Under Secretary to Govt. PPP Cell,

P.R.2237 Infrastructure Development Department.

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಪಿಪಿಪಿ ಕೋಶಕ್ಕೆ ಅಗತ್ಯ ಸಾಮಗ್ರಿ ಖರೀದಿಸಲು ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಮೂಅಇ 05 ಯುಐಪಿ 2006 (ಪಿ), ದಿನಾಂಕ : 18–6–2007.

2. ಸರ್ಕಾರದ ಆದೇಶ ಸಂಖ್ಯೆ : ಮೂಅಇ 77 ಮೂಇವಿ 2007, ದಿನಾಂಕ : 25–10–2007.

3. ಸರ್ಕಾರದ ಆದೇಶ ಸಂಖ್ಯೆ : ಮೂಅಇ 80 ಮೂತಾಂವಿ 2008, ದಿನಾಂಕ : 23–10–2008.

4. ಸರ್ಕಾರದ ಆದೇಶ ಸಂಖ್ಯೆ : ಮೂಅಇ 87 ಮೂಇವಿ 2009, ದಿನಾಂಕ : 26–8–2009.

5. ಸಿ.ಎಫ್.ಓ ಹಾಗೂ ಕಂಪನಿ ಸೆಕ್ರೆಟರಿ, ಐಡೆಕ್‌ರವರ ಪತ್ರ ಸಂ. ಐಡೆಕ್/2010–11/633, ದಿನಾಂಕ : 14–7–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂಖ್ಯೆ (1) ರ ಆದೇಶದಲ್ಲಿ ಪ್ರಧಾನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿ ನಿರ್ದೇಶಕರು ಹಾಗೂ ತಜ್ಞರನ್ನು ಒಳಗೊಂಡಂತೆ ಪಿಪಿಪಿ ಕೋಶವನ್ನು ರಚಿಸಲು ಅನುಮೋದನೆಯನ್ನು ನೀಡಲಾಗಿದೆ.

2. ಮೇಲೆ ಓದಲಾದ (2) ರ ಆದೇಶದಲ್ಲಿ ಹೊಸ ಮೂಲಸೌಲಭ್ಯ ಅಭಿವೃದ್ಧಿ ನೀತಿ 2007 ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಪಿಪಿಪಿ ಯೋಜನೆಗಳನ್ನು ಅನುಷ್ಠಾನಗೊಳಿಸುವ ಇಲಾಖೆಯ ಅಧಿಕಾರಿಗಳಿಗೆ/ಏಜನ್ಸಿಗಳಿಗೆ ತರಬೇತಿ ನೀಡುವುದಕ್ಕೆ ರೂ. 5.00 ಲಕ್ಷಗಳನ್ನು ಹಾಗೂ ಮಾಹಿತಿ ಮತ್ತು ದಾಖಲೆ ಕೇಂದ್ರಕ್ಕಾಗಿ (Information & Documentation Centre) ರೂ. 5.00 ಲಕ್ಷಗಳು ಒಟ್ಟು ರೂ. 10.00 ಲಕ್ಷಗಳನ್ನು ಬಿಡುಗಡೆ ಮಾಡಿದೆ.

3. ಮೇಲೆ ಓದಲಾದ (3) ರ ಆದೇಶದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ನೀತಿ 2007 ರಂತೆ ಸಾಮರ್ಥ್ಯ ಅಭಿವೃದ್ಧಿ ಬಗ್ಗೆ ತರಬೇತಿ ಕಾರ್ಯಕ್ರಮಗಳ ಸಮರ್ಪಕ ನಿರ್ವಹಣೆ ಹಾಗೂ ಈ ಇಲಾಖೆಯಲ್ಲಿ ಮಾಹಿತಿ ಮತ್ತು ದಾಖಲೆ ಕೇಂದ್ರ ಸ್ಥಾಪನೆ, ಉನ್ನತೀಕರಣ ಮತ್ತು ಲಾಜಿಸ್ಟಿಕ್‌ಗಳಿಗೆ ಅಗತ್ಯವಾದ ಸಾಮಗ್ರಿಗಳನ್ನು ಐಡೆಕ್ ಮುಖಾಂತರ ಖರೀದಿಸಲು ರೂ. 10.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

4. ಮೇಲೆ ಓದಲಾದ (4) ರ ಆದೇಶದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಪಿಪಿಪಿ ಕೋಶಕ್ಕೆ ಅಗತ್ಯ ಸಾಮಗ್ರಿಗಳಾದ ಜೆರಾಕ್ಸ್ ಯಂತ್ರ ಸ್ಟೇಷನರಿ ಸಾಮಗ್ರಿ, ಲ್ಯಾಪ್‌ಟಾಪ್/ ಡೆಸ್ಕ್‌ಟಾಪ್ ಕಂಪ್ಯೂಟರ್ ಫೆರಿಫರಲ್ಸ್ ಇತ್ಯಾದಿ ಖರೀದಿ ಮಾಡಲು ರೂ. 15.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

5. ಮೇಲೆ ಓದಲಾದ (5) ರ ಪತ್ರದಲ್ಲಿ ಸಿಎಫ್‌ಓ ಮತ್ತು ಕಂಪನಿ ಕಾರ್ಯದರ್ಶಿ ಐಡೆಕ್ ಇವರು ವರದಿ ಮಾಡಿ, ಸರ್ಕಾರವು ಸಂಸ್ಥೆಗೆ ಬಿಡುಗಡೆ ಮಾಡಿದ ಅನುದಾನವನ್ನು ಪಿಪಿಪಿ ಕೋಶದ ತರಬೇತಿ, capacity building, ಮಾಹಿತಿ ಡಾಕ್ಯೂಮೆಂಟೇಷನ್ ಸೆಂಟರ್ ಇವುಗಳಿಗೆ, ವೆಚ್ಚವಾಗಿದ್ದು 2010–11ನೇ ಸಾಲಿನ ವೆಚ್ಚಗಳಿಗಾಗಿ ಸರ್ಕಾರವು ಹೆಚ್ಚುವರಿಯಾಗಿ ರೂ. 30.00 ಲಕ್ಷ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ.

6. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 72 ಮೂಇವಿ 2010, ಬೆಂಗಳೂರು, ದಿನಾಂಕ : 18–8–2010.**

ಪ್ರಸ್ತಾವನೆಯಲ್ಲಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಆರ್ಥಿಕ ವರ್ಷದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಪಿಪಿಪಿ ಕೋಶಕ್ಕೆ ಅಗತ್ಯ ಸಭೆಗಳು ಹಾಗೂ ಇತರೆ ಖರ್ಚುಗಳಿಗಾಗಿ 30.00 ಲಕ್ಷಗಳ ಅನುದಾನವನ್ನು (ರೂಪಾಯಿ ಮುವತ್ತು ಲಕ್ಷಗಳು ಮಾತ್ರ) ಬಿಡುಗಡೆ ಮಾಡಿದೆ.

2. ಈ ಮೊತ್ತವನ್ನು ಲೆಕ್ಕ ಶೀರ್ಷಿಕೆ 3451-00-090-1-06-059-Infrastructure Preliminary Studies-Other Expenditure ಇದರಡಿ 2010–11ನೇ ಸಾಲಿನಲ್ಲಿ ಒದಗಿಸಿರುವ ರೂ. 797.00 ಲಕ್ಷಗಳ ಅನುದಾನದಿಂದ ಭರಿಸತಕ್ಕದ್ದು.

3. ಸದರಿ ಮೊತ್ತವನ್ನು ಚೀಫ್ ಫೈನಾನ್ಷಿಯಲ್ ಆಫೀಸರ್ ಮತ್ತು ಕಂಪನಿ ಕಾರ್ಯದರ್ಶಿ, ಐಡೆಕ್ ಇವರು ಪೇಯಿಸ್ ರಸೀದಿಯ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿ ತೆಗೆಯಲು ಅನುಮತಿಸಿದೆ. ಹಾಗೂ ಖರ್ಚು ಮಾಡಿದ ಪ್ರತಿಯೊಂದು ಬಾಬ್ತು ಹಣಕ್ಕೆ ಅಗತ್ಯ ದಾಖಲಾತಿಗಳನ್ನು ನಿರ್ವಹಿಸತಕ್ಕದ್ದು.

4. ಈ ಆದೇಶವನ್ನು ದಿನಾಂಕ : 16–5–2008 ರ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2008 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಗಳಿಗೆ ನೀಡಿರುವ ಆರ್ಥಿಕ ಅಧಿಕಾರ ಪ್ರತ್ಯಾ–ಯೋಜನೆಯಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಆರ್. ಶಿವಲಿಂಗಯ್ಯ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

ಪಿ. ಆರ್. 2238

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ : ರಾಜ್ಯದಲ್ಲಿ ಪ್ರಾಯೋಗಿಕವಾಗಿ ಸಾಮಾಜಿಕ ಆರ್ಥಿಕ ಸಮೀಕ್ಷೆ (ಸೋಷಿಯೋ ಎಕನಾಮಿಕ್ ಸರ್ವೆ–ಪೈಲೆಟ್ ಬಿಪಿಎಲ್ ಸೆನ್ಸಸ್–2010) ನಡೆಸುವ ಕುರಿತು.**

**ಓದಲಾಗಿದೆ :** ಸರ್ಕಾರದ ಪತ್ರದ ಸಮಸಂಖ್ಯೆ : ದಿನಾಂಕ : 3–8–2010.

**ಪ್ರಸ್ತಾವನೆ :**

ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ರಾಷ್ಟ್ರಾದ್ಯಂತ ಸಾಮಾಜಿಕ ಆರ್ಥಿಕ ಸಮೀಕ್ಷೆ (ಸೋಷಿಯೋಎಕನಾಮಿಕ್ ಸರ್ವೆ–ಪೈಲೆಟ್ ಬಿಪಿಎಲ್ ಸೆನ್ಸಸ್–2010) ನಡೆಸಲು ಉದ್ದೇಶಿಸಿದೆ. ಈ ಸಮೀಕ್ಷೆಯ ಪೂರ್ಣ ವೆಚ್ಚವನ್ನು ಕೇಂದ್ರ ಸರ್ಕಾರವೇ ಭರಿಸುವುದು. ಕೇಂದ್ರ ಸರ್ಕಾರದ ಸೂಚನೆಯಂತೆ ರಾಜ್ಯದ 14 ಜಿಲ್ಲಾ ಪಂಚಾಯತಿಗಳ 14 ಗ್ರಾಮಗಳಲ್ಲಿ (ಚಿಕ್ಕಮಗಳೂರು ಜಿಲ್ಲೆಯ ಬುಯನಕೋಟೆ, ದಕ್ಷಿಣ ಕನ್ನಡ ಜಿಲ್ಲೆಯ ಸಸಿಹಿತ್ಲು, ದಾವಣಗೆರೆ ಜಿಲ್ಲೆಯ ಸಿದ್ದಾಪುರ, ಧಾರವಾಡ ಜಿಲ್ಲೆಯ ಕಟ್ನೂರ್, ಹಾಸನ ಜಿಲ್ಲೆಯ ನೀರಗುಂದ, ಹಾವೇರಿ ಜಿಲ್ಲೆಯ ಹೀರಂಜಿ, ಕೊಡಗು ಜಿಲ್ಲೆಯ ಕಟ್ಟೇಪುರ, ಕೋಲಾರ ಜಿಲ್ಲೆಯ ಚಿಂಚಂದಲಹಳ್ಳಿ, ಕೊಪ್ಪಳ ಜಿಲ್ಲೆಯ ಬೈರ್‌ನಾಯಕನಹಳ್ಳಿ, ಮೈಸೂರು ಜಿಲ್ಲೆಯ ರಂಗನಾಥಪುರ, ರಾಮನಗರ ಜಿಲ್ಲೆಯ ರಾಮಾಪುರ, ಶಿವಮೊಗ್ಗ ಜಿಲ್ಲೆಯ ಗಿನಿವಾಲ, ಉಡುಪಿ ಜಿಲ್ಲೆಯ ಇನ್ನಂಜೆ, ಉತ್ತರ ಕನ್ನಡ ಜಿಲ್ಲೆಯ ಬೆಂಗ್ಳೆ) ಪ್ರಾಯೋಗಿಕವಾಗಿ ಸಾಮಾಜಿಕ ಆರ್ಥಿಕ ಸಮೀಕ್ಷೆ (ಸೋಷಿಯೋ ಎಕನಾಮಿಕ್ ಸರ್ವೆ–ಪೈಲೆಟ್ ಬಿಪಿಎಲ್ ಸೆನ್ಸಸ್–2010) ನಡೆಸಬೇಕಾಗಿದೆ. ರಾಜ್ಯದಲ್ಲಿ ಪ್ರಾಯೋಗಿಕ ಸರ್ವೆ ನಡೆಸಲು ಇನ್ಸಿಟಿಟ್ಯೂಟ್ ಫಾರ್ ಸೋಷಿಯಲ್ ಅಂಡ್ ಎಕಾನಾಮಿಕ್ ಛೇಂಜ್ (ಐಸಾಕ್), ಬೆಂಗಳೂರು ಸಂಸ್ಥೆಯನ್ನು ತಾಂತ್ರಿಕ ಸಹಾಯಕ ಏಜೆನ್ಸಿಯಾಗಿ ಗುರುತಿಸಲಾಗಿದೆ. ರಾಜ್ಯದ 14 ಗ್ರಾಮಗಳಲ್ಲಿ ಪ್ರಾಯೋಗಿಕ ಸಮೀಕ್ಷೆಯನ್ನು ಪರಿಣಾಮಕಾರಿಯಾಗಿ ನಡೆಸಲು ಜಿಲ್ಲಾ ಮಟ್ಟದ ಅಧಿಕಾರಿಗಳನ್ನು ಮೇಲುಸ್ತುವಾರಿ ಅಧಿಕಾರಿಯನ್ನಾಗಿ ನೇಮಿಸಬೇಕಾಗಿದೆ. ಆದುದರಿಂದ ಈ ಆದೇಶ :

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 26 ಎಸ್‌ಜಿವೈ 2010, ಬೆಂಗಳೂರು, ದಿನಾಂಕ : 18–8–2010.**

ರಾಜ್ಯ ಸರ್ಕಾರವು, ಪ್ರಾಯೋಗಿಕ ಸಾಮಾಜಿಕ ಆರ್ಥಿಕ ಸಮೀಕ್ಷೆ (ಸೋಷಿಯೋ ಎಕನಾಮಿಕ್ ಸರ್ವೆ–ಪೈಲೆಟ್ ಬಿಪಿಎಲ್ ಸೆನ್ಸಸ್–2010) ನಡೆಸಲು ಈ ಕೆಳಕಂಡ ಅಧಿಕಾರಿಗಳನ್ನು ಆಯಾ ಜಿಲ್ಲೆಯ ಮೇಲುಸ್ತುವಾರಿ ಅಧಿಕಾರಿಗಳನ್ನಾಗಿ ನೇಮಿಸಲಾಗಿದೆ.

| ಕ್ರ.ಸಂ. | ಜಿಲ್ಲಾ ಪಂಚಾಯತ್ ಹೆಸರು. | ಸಮೀಕ್ಷೆಯ ಮೇಲುಸ್ತುವಾರಿ ಅಧಿಕಾರಿಯ ಹೆಸರು. ಶ್ರೀ/ಶ್ರೀಮತಿ | ಹುದ್ದೆ |
|---|---|---|---|
| 1 | ಚಿಕ್ಕಮಗಳೂರು | ಸುಬ್ಬರಾವ್ | ಮುಖ್ಯ ಯೋಜನಾಧಿಕಾರಿ |
| 2 | ದಕ್ಷಿಣ ಕನ್ನಡ | ಸೀತಮ್ಮ | ಯೋಜನಾ ನಿರ್ದೇಶಕರು (ಡಿಆರ್‌ಡಿಎ) |
| 3 | ದಾವಣಗೆರೆ | ವಿಶ್ವನಾಥ್ ಮುದ್ದಜ್ಜಿ | ಮೌಲ್ಯ ಮಾಪನ ಮತ್ತು ಉಸ್ತುವಾರಿ ಅಧಿಕಾರಿ |
| 4 | ಧಾರವಾಡ | ಎ.ಪಿ. ಪಾಲಂಕರ್ | ಸಹಾಯಕ ಯೋಜನಾಧಿಕಾರಿ, ಎಂಜಿಎನ್‌ಆರ್‌ಇಜಿಎ, ಧಾರವಾಡ ತಾ.ಪಂ. |
| 5 | ಹಾಸನ | ಜಗದೀಶ್ | ಯೋಜನಾ ನಿರ್ದೇಶಕರು (ಡಿಆರ್‌ಡಿಎ) |
| 6 | ಹಾವೇರಿ | ಹೆಚ್.ಎಂ. ಶ್ರೀನಿವಾಸ | ಯೋಜನಾ ನಿರ್ದೇಶಕರು (ಡಿಆರ್‌ಡಿಎ) |
| 7 | ಕೊಡಗು | ಸಿದ್ದಯ್ಯ | ಮುಖ್ಯ ಯೋಜನಾಧಿಕಾರಿ |
| 8 | ಕೋಲಾರ | ಲಕ್ಷ್ಮೀನಾರಾಯಣ | ಮುಖ್ಯ ಯೋಜನಾಧಿಕಾರಿ |
| 9 | ಕೊಪ್ಪಳ | ಎಸ್.ಜಿ. ಕೋರವರ್ | ಯೋಜನಾ ನಿರ್ದೇಶಕರು (ಡಿಆರ್‌ಡಿಎ) |
| 10 | ಮೈಸೂರು | ಸಿ.ಎಂ. ದೊಡ್ಡಮನಿ | ಉಪ ನಿರ್ದೇಶಕರು (ಕೆವಿಐ), ಜಿಪಂ, ಮೈಸೂರು |
| 11 | ರಾಮನಗರ | ಡಿ. ಜಯರಾಂ | ಮುಖ್ಯ ಯೋಜನಾಧಿಕಾರಿ |
| 12 | ಶಿವಮೊಗ್ಗ | ಎನ್. ಮುನಿರಾಜಪ್ಪ | ಯೋಜನಾ ನಿರ್ದೇಶಕರು (ಡಿಆರ್‌ಡಿಎ) |
| 13 | ಉಡುಪಿ | ಡಿ. ಪ್ರಾಣೇಶ್‌ರಾವ್ | ಉಪ ಕಾರ್ಯದರ್ಶಿ |
| 14 | ಉತ್ತರ ಕನ್ನಡ | ಎಸ್.ವೈ. ಕೋರವಾರ್ | ಮುಖ್ಯ ಯೋಜನಾಧಿಕಾರಿ |

ಪ್ರಾಯೋಗಿಕ ಸಮೀಕ್ಷೆ ಕಾರ್ಯದಲ್ಲಿ ಮೇಲುಸ್ತುವಾರಿ ಅಧಿಕಾರಿಗಳ ಪಾತ್ರ :–

* ಸಮೀಕ್ಷೆಗೆ ಅಗತ್ಯವಿರುವ ಸಮೀಕ್ಷೆದಾರರನ್ನು (Investigator) ಆಯ್ಕೆ ಮಾಡುವುದು.
* ಸಮೀಕ್ಷೆಯ ಎಲ್ಲಾ ತರಬೇತಿಗಳಿಗೆ ಸಮೀಕ್ಷೆದಾರರೊಂದಿಗೆ (Investigator) ಕಡ್ಡಾಯವಾಗಿ ಹಾಜರಾಗುವುದು.
* ಗ್ರಾಮದ ಮಾಸ್ಟರ್ ಲೀಸ್ಟ್ ಹಾಗೂ ಗ್ರಾಮದ ಪ್ರಶ್ನಾವಳಿಗೆ ಮಾಹಿತಿಯನ್ನು ಖುದ್ದಾಗಿ ಸಂಗ್ರಹಿಸಿ ತುಂಬುವುದು.
* ಸಮೀಕ್ಷೆಯ ಗಣತಿದಾರರಿಗೆ 2010 ರ ಜನಗಣತಿಗಾಗಿ ತಯಾರಿಸಿದ ಗ್ರಾಮದ ಭೂಪಟದ ಸಹಾಯದಿಂದ ಕುಟುಂಬಗಳ ಹಂಚಿಕೆ ಮಾಡುವುದು.
* ಬಿಪಿಎಲ್ ಸಮೀಕ್ಷೆ ಮಾಡುವಾಗ ಸರ್ವೆ ಕಾರ್ಯ ಪೂರ್ಣವಾಗುವವರೆವಿಗೂ ಆ ಗ್ರಾಮದಲ್ಲಿಯೇ ವಾಸ್ತವ್ಯವಿದ್ದು, ಮೇಲುಸ್ತುವಾರಿ ಕಾರ್ಯ ನಿರ್ವಹಿಸುವುದು.
* ಗಣತಿ ಕಾರ್ಯ ನಿರ್ವಹಿಸುವಾಗ ಗಣತಿದಾರರಿಗೆ ಏನಾದರೂ ತೊಂದರೆಯಾದಲ್ಲಿ ನಿವಾರಣೆ ಮಾಡುವುದು.
* ಗ್ರಾಮದಲ್ಲಿನ ಕುಟುಂಬದ ಸಮೀಕ್ಷೆ ನಡೆಸುವಾಗ ಆ ಗ್ರಾಮದ ಕೋಡ್‌ನ್ನು ಕಡ್ಡಾಯವಾಗಿ ಪ್ರತಿ ನಮೂನೆಯಲ್ಲಿ ನಮೂದಿಸಿರುವ ಬಗ್ಗೆ ಖಚಿತ ಪಡಿಸಿಕೊಳ್ಳುವುದು.
* ನಮೂನೆಯ ಎಲ್ಲಾ ಕಾಲಂಗಳು ತುಂಬಿರುವ ಬಗ್ಗೆ ಖಚಿತಪಡಿಸಿಕೊಂಡು ಪ್ರತಿ ನಮೂನೆಯಲ್ಲೂ ಸಹಿ ಮಾಡುವುದು.

ಆಯಾ ಜಿಲ್ಲೆಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಗಣತಿಯ ಸಮೀಕ್ಷೆಯನ್ನು ಸುಸೂತ್ರವಾಗಿ ನಡೆಸುವ ಬಗ್ಗೆ ಉಸ್ತುವಾರಿ ಮಾಡುವುದು. ಗಣತಿಯ ಬಗ್ಗೆ ಸರ್ಕಾರ ಅಗ್ಗಿಂದಾಗ್ಗೆ ನೀಡುವ ಎಲ್ಲಾ ಸೂಚನೆಗಳನ್ನು ಕಡ್ಡಾಯವಾಗಿ ಪಾಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಡಿ.ಕೆ. ರಂಗಸ್ವಾಮಿ)**
ನಿರ್ದೇಶಕರು (ಸ್ವಉಕಾ) ಹಾಗೂ
ಪ.ನಿ. ಸರ್ಕಾರದ ಅಪರ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್‌ಇಲಾಖೆ

ಪಿ. ಆರ್. 2239

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ** : 2010–11ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ರಾಜ್ಯದ ಪಾಲಿನ ಒಂದನೇ ಕಂತಿನ ಅನುದಾನವನ್ನು ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** :
1) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್–18014/01/2010–11 ಡಿಆರ್‌ಡಿಎ (ಎಸ್‌ಎಲ್ ನಂ. 10) ದಿನಾಂಕ 17–05–2010.
2) ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 6 ಎಸ್‌ಜೆವೈ (ಡಿಆರ್‌ಡಿಎ) 2010, ಬೆಂಗಳೂರು, ದಿನಾಂಕ 03–08–2010.
3) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಅರ್–17014/10/2010–11, ಡಿಆರ್‌ಡಿಎ (ಎಸ್‌ಎಲ್ ನಂ. 34) ದಿನಾಂಕ 15–07–2010.

**ಪ್ರಸ್ತಾವನೆ :**

ಡಿಆರ್‌ಡಿಎ ಆಡಳಿತ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 75:25ರ ಅನುಪಾತದಲ್ಲಿ ಭರಿಸುತ್ತವೆ. 2010–11ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ನವದೆಹಲಿ ಇವರು ಡಿಆರ್‌ಡಿಎ ಆಡಳಿತ ಯೋಜನೆಗೆ ಓದಲಾಗಿದೆ. (1)ರಲ್ಲಿ ಒಂದನೇ ಕಂತಿನ ಅನುದಾನ ರೂ. 8,81,44,000 ಗಳನ್ನು ರಾಜ್ಯದ 29 ಜಿಲ್ಲಾ ಪಂಚಾಯತಿಗಳಿಗೆ (ಚಿಕ್ಕಬಳ್ಳಾಪುರ ಹೊರತುಪಡಿಸಿ) ಬಿಡುಗಡೆ ಮಾಡಿದೆ. ಅದರಂತೆ, ಉಲ್ಲೇಖಿತ (2)ರ ಆದೇಶದಲ್ಲಿ ರಾಜ್ಯ ಸರ್ಕಾರವು ಮೊದಲನೇ ಕಂತಿನ ಅನುದಾನ ರೂ. 2,93,81,000 ಗಳನ್ನು ಬಿಡುಗಡೆ ಮಾಡಲಾಗಿತ್ತು. ಉಲ್ಲೇಖಿತ (3)ರ ಆದೇಶದಲ್ಲಿ ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯತಿಗೆ ಮೊದಲನೇ ಕಂತಿನ ಅನುದಾನ ರೂ. 33,58,000 ಗಳನ್ನು ಕೇಂದ್ರ ಸರ್ಕಾರ ಬಿಡುಗಡೆ ಮಾಡಿದೆ. ಕೇಂದ್ರ ಸರ್ಕಾರ ಬಿಡುಗಡೆ ಗೊಳಿಸಿದ ಮೊದಲನೇ ಕಂತಿನ ಅನುದಾನಕ್ಕನುಗುಣವಾಗಿ ರಾಜ್ಯ ಸರ್ಕಾರ ತನ್ನ ಪಾಲಿನ ಮೊದಲನೇ ಕಂತಿನ ಅನುದಾನ ರೂ. 11,19,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 6 ಎಸ್‌ಜೆವೈ (ಡಿಆರ್‌ಡಿಎ) 2010, ಬೆಂಗಳೂರು, ದಿನಾಂಕ: 17–08–2010**

ರಾಜ್ಯ ಸರ್ಕಾರವು, ಡಿಆರ್‌ಡಿಎ ಆಡಳಿತ ಯೋಜನೆಯಡಿ ಮೊದಲನೇ ಕಂತಿನ ಅನುದಾನವಾಗಿ ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯತಿಗೆ ರೂ. 11,19,000 ಗಳನ್ನು (ರೂ. ಹನ್ನೊಂದು ಲಕ್ಷದ ಹತ್ತೊಂಬತ್ತು ಸಾವಿರ ಮಾತ್ರ) ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ.ಸಂ. | ಜಿಲ್ಲಾ ಪಂಚಾಯತಿ | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಮೊದಲನೇ ಕಂತಿನ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಮೊದಲನೇ ಕಂತಿನ ಅನುದಾನ |
|---|---|---|---|---|---|
| 1 | ಚಿಕ್ಕಬಳ್ಳಾಪುರ | 453 | 0600ದದ0001 | 33,58,000 | 11,19,000 |

**ಷರತ್ತುಗಳು :**

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾ ಪಂಚಾಯತ್ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸಲು ಅವಕಾಶವಿದೆ. ಕೇಂದ್ರ ಹಾಗೂ ರಾಜ್ಯದ ಪಾಲಿನ

ಅನುದಾನವು ಸೇರಿ ವೆಚ್ಚವನ್ನು ಭರಿಸಬೇಕಾಗಿರುವುದರಿಂದ ರಾಜ್ಯದ ಪಾಲಿನ ಅನುದಾನವನ್ನು ವೇತನ ಮತ್ತು ವೇತನೇತರವೆಂದು ವಿಂಗಡಿಸದೆ ಒಟ್ಟಾರೆ ರಾಜ್ಯದ ಪಾಲಿನ ಅನುದಾನವನ್ನು ಖಜಾನೆಯಿಂದ ಡ್ರಾ ಮಾಡಲು ಖಜಾನಾಧಿಕಾರಿಗಳು ಅನುಮತಿ ನೀಡತಕ್ಕದ್ದು.

ಯೋಜನೆಯ ವೆಚ್ಚವನ್ನು ಲೆಕ್ಕ ಶೀರ್ಷಿಕೆ : "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ (ಕೇಂದ್ರ ಪುರಸ್ಕೃತ ಯೋಜನೆ) 2010–11 (2515–00–196–6–06)" (ಲಿಂಕ್ ಕೋಡ್ 2515–00–101–0–19)ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜಡ್‌ಪಿಎ 2007 (ಪಿ2) ದಿನಾಂಕ 26–04–2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ–1ಕ್ಕೆ ಜಮೆ ಮಾಡಿಕೊಂಡು ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತಿ ಇವರು ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ) ಹಾಗೂ ಪದ ನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣಪತ್ರ ಹಾಗೂ ಲೆಕ್ಕ ಪರಿಶೋಧನ ವರದಿಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಇವರ ಸಹಮತಿ ಸಂಖ್ಯೆ : ಗ್ರಾಅಪ 178 ಪಿಬಿಎಸ್ 2010, ದಿನಾಂಕ 11–08–2010 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಡಿ. ಕೆ. ರಂಗಸ್ವಾಮಿ)**

ನಿರ್ದೇಶಕರು (ಸ್ವ.ಉ.ಕಾ.) ಹಾಗೂ ಪ.ನಿ.

ಸರ್ಕಾರದ ಅಪರ ಕಾರ್ಯದರ್ಶಿ,

ಪಿ.ಆರ್. 2240 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಕರ್ನಾಟಕ ಸರ್ಕಾರ ಸಚಿವಾಲಯದ ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಉಪಕಾರ್ಯದರ್ಶಿ ಹುದ್ದೆಗೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ** :
1) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 445 ಸಅಸೇ 2009, ದಿನಾಂಕ 28–5–2010.
2) ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 194 ಸಅಸೇ 2010, ದಿನಾಂಕ 26–6–2010 ಮತ್ತು ತಿದ್ದೋಲೆ ದಿನಾಂಕ 7–7–2010.
3) ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಕಸಂವಾಪ್ರ 139 ಸ್ಪೀಮರ 2010, ದಿನಾಂಕ 13–7–2010.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 28–5–2010ರ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯಲ್ಲಿ ಉಪಕಾರ್ಯದರ್ಶಿ ಹುದ್ದೆಯನ್ನು ಸೃಜಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಅಧಿಸೂಚನೆ ಮತ್ತು ತಿದ್ದೋಲೆಯಲ್ಲಿ ಉಪಕಾರ್ಯದರ್ಶಿ ಹುದ್ದೆಗೆ ಶ್ರೀ ಕೆ. ಸುಧಾಕರಶೆಟ್ಟಿ ಇವರನ್ನು ನೇಮಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಉಪಕಾರ್ಯದರ್ಶಿ ಹುದ್ದೆಗೆ ಲಭ್ಯವಿರುವ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸುವಂತೆ ಕೋರಲಾಗಿದೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 445 ಸಅಸೇ 2009, ಬೆಂಗಳೂರು, ದಿನಾಂಕ: 19–08–2010**

ಕರ್ನಾಟಕ ಸರ್ಕಾರ ಸಚಿವಾಲಯದ ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯಲ್ಲಿ ದಿನಾಂಕ 28–5–2010ರ ಆದೇಶದಲ್ಲಿ ಸೃಜಿಸಲಾಗಿರುವ ಸರ್ಕಾರದ ಉಪಕಾರ್ಯದರ್ಶಿಯವರ ಆಪ್ತ ಶಾಖೆಗೆ ಈ ಕೆಳಕಂಡ ಪೂರಕ ಹುದ್ದೆಗಳನ್ನು ಸೃಜಿಸಲಾಗಿದೆ ಮತ್ತು ಸದರಿ ಹುದ್ದೆಗಳನ್ನು re-deployment ಮೂಲಕ ಭರ್ತಿ ಮಾಡಲು ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಹಿರಿಯ ಶೀಘ್ರಲಿಪಿಗಾರ/ಶೀಘ್ರಲಿಪಿಗಾರ | 1 ಹುದ್ದೆ |
| 2 | ಕಿರಿಯ ಸಹಾಯಕ | 1 ಹುದ್ದೆ |
| 3 | ದಲಾಯತ್ | 1 ಹುದ್ದೆ |
| | **ಒಟ್ಟು** | **3 ಹುದ್ದೆಗಳು** |

ಈ ಅದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 609 ವೆಚ್ಚ 12/2010, ದಿನಾಂಕ 5–8–2010ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎ. ಆರ್. ವಿಜಯಾನಂದ ಶರ್ಮ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2241 ಸಿ.ಆ.ಸು. ಇಲಾಖೆ (ಸೇವೆಗಳು–3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಕರ್ನಾಟಕ ಸರ್ಕಾರ ಸಚಿವಾಲಯದ ಸಿಆಸು ಇಲಾಖೆ (ಚುನಾವಣೆ ವಿಭಾಗ) ದಲ್ಲಿನ ಸಿನಿಯರ್ ಪ್ರೋಗ್ರಾಮರ್ ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ** :
1) ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 56 ಸಸಿವಿ 2004, ದಿನಾಂಕ 23–12–2004
2) ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 30 ಸಸಿವಿ 2006, ದಿನಾಂಕ 07–06–2006
3) ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 607 ಸಅಸೇ 2008, ದಿನಾಂಕ 23–01–2009
4) ಅನಧಿಕೃತ ಟಿಪ್ಪಣಿ ಸಂಖ್ಯೆ : ಸಿಆಸುಇ 68 ಚುಸಿಆ 2003, ದಿನಾಂಕ 12–01–2010, ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಚುನಾವಣೆಗಳು) ಅವರಿಂದ.

**ಪ್ರಸ್ತಾವನೆ :**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಆಸು ಇಲಾಖೆಯ ಪ್ರೋಗ್ರಾಮರ್ ಹುದ್ದೆಯನ್ನು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ 23–12–2004ರ ಸರ್ಕಾರಿ ಆದೇಶದಲ್ಲಿ ಸಿಆಸುಇ (ಚುನಾವಣೆ) ಇಲ್ಲಿನ ಜೂನಿಯರ ಪ್ರೋಗ್ರಾಮರ್ ಹುದ್ದೆಯನ್ನು ಸೀನಿಯರ್ ಪ್ರೋಗ್ರಾಮರ್ ಹುದ್ದೆಗೆ ಉನ್ನತೀಕರಿಸಲಾಗಿದೆ ಹಾಗೂ ಕಾಲಕಾಲಕ್ಕೆ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಆದೇಶದಲ್ಲಿ ಸದರಿ ಹುದ್ದೆಯನ್ನು ದಿನಾಂಕ 31–03–2010 ರವರೆಗೆ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿನಾಂಕ 12–01–2010ರ ಅನಧಿಕೃತ ಟಿಪ್ಪಣಿಯಲ್ಲಿ ಸಿಆಸುಇ (ಚುನಾವಣೆ) ವಿಭಾಗದಲ್ಲಿ ಸೀನಿಯರ್ ಪ್ರೊಗ್ರಾಮರ್ ಹುದ್ದೆಯನ್ನು ದಿನಾಂಕ 01–04–2010 ರಿಂದ 31–03–2011 ರವರೆಗೆ ಮುಂದುವರಿಸುವಂತೆ ಹಾಗೂ ಸದರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎನ್. ರಾಜು ಇವರನ್ನು ನಿಯೋಜನೆ ಮೇಲೆ ಮುಂದುವರಿಸುವಂತೆ ಕೋರಿದ್ದಾರೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 60 ಸಅಸೇ 2010, ಬೆಂಗಳೂರು, ದಿನಾಂಕ: 19–08–2010**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಕರ್ನಾಟಕ ಸರ್ಕಾರ ಸಚಿವಾಲಯದ ಸಿಆಸು ಇಲಾಖೆ–ಚುನಾವಣೆ ವಿಭಾಗದಲ್ಲಿನ ಸೀನಿಯರ್ ಪ್ರೋಗ್ರಾಮರ್ ಹುದ್ದೆಯನ್ನು ದಿನಾಂಕ 01–04–2010 ರಿಂದ 1 ವರ್ಷದ ಅವಧಿಗೆ ಮುಂದುವರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 444/ಸೇ–1/2010, ದಿನಾಂಕ 10–05–2010 ಹಾಗೂ ಸಿಆಸುಇ–ಸೇವಾನಿಯಮ ಶಾಖೆಯ ಟಿಪ್ಪಣಿ ಸಂಖ್ಯೆ : ಸಿಆಸುಇ 90 ಸೇನಿಎ 2010, ದಿನಾಂಕ 11–03–2010ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎ. ಆರ್. ವಿಜಯಾನಂದ ಶರ್ಮ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

ಪಿ.ಆರ್. 2242

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ** : ಮೈಸೂರು ಸಕ್ಕರೆ ಕಾರ್ಖಾನೆ (ನಿ) ಮಂಡ್ಯ, ಈ ಕಾರ್ಖಾನೆಯ 2010–11ನೇ ಸಾಲಿನ ಕಬ್ಬು ಅರೆಯುವ ಕಾರ್ಯಕ್ಕಾಗಿ ಸರ್ಕಾರದಿಂದ ದುಡಿಯುವ ಬಂಡವಾಳ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : 1) ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರ ಸಂಖ್ಯೆ : ಎಂಎಸ್‌ಕೋ/ಎಂಡಿ/ಡಿಓ/2010/71, ದಿನಾಂಕ 06–07–2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿರುವ ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರದಲ್ಲಿ ಕಾರ್ಖಾನೆಯ 2010–11ನೇ ಸಾಲಿನ ಕಬ್ಬು ಅರೆಯುವ ಕಾರ್ಯವನ್ನು 2010ರ ಜುಲೈ ತಿಂಗಳಿಂದ ಪ್ರಾರಂಭಿಸಿರುತ್ತಿರುವುದಾಗಿ ಈ ಉದ್ದೇಶಕ್ಕಾಗಿ ಜುಲೈ, ಆಗಸ್ಟ್, ಸೆಪ್ಟೆಂಬರ್, ಅಕ್ಟೋಬರ್, ನವೆಂಬರ್ ತಿಂಗಳುಗಳಿಗೆ ಒಟ್ಟು 31.05 ಕೋಟಿ ರೂ.ಗಳ ದುಡಿಯುವ ಬಂಡವಾಳವನ್ನು ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ವ್ಯವಸ್ಥಾಪಕ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ 2010–11ನೇ ಸಾಲಿನ ಆಯವ್ಯಯದಲ್ಲಿ ಮೈಸೂರು ಸಕ್ಕರೆ ಕಾರ್ಖಾನೆಯ ಯಂತ್ರೋಪಕರಣಗಳ ಆಧುನೀಕರಣಕ್ಕಾಗಿ ಅನುದಾನದಲ್ಲಿ ಒದಗಿಸಲಾಗಿರುವ 20.00 ಕೋಟಿ ರೂ.ಗಳಲ್ಲಿ ಕಾರ್ಖಾನೆಯ ದುಡಿಯುವ ಬಂಡವಾಳಕ್ಕಾಗಿ 5.00 ಕೋಟಿ ರೂ.ಗಳನ್ನು ಬಿಡುಗಡೆಗೊಳಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 49 ಎಸ್‌ಜಿಎಫ್ 2010, ಬೆಂಗಳೂರು, ದಿನಾಂಕ: 19–08–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ ಈ ಕಾರ್ಖಾನೆಗೆ 2010–11ನೇ ಸಾಲಿಗೆ ಕಾರ್ಖಾನೆಯ ಯಂತ್ರೋಪಕರಣಗಳ ಆಧುನೀಕರಣಕ್ಕಾಗಿ ಅನುದಾನದಲ್ಲಿ ಒದಗಿಸಲಾಗಿರುವ 20.00 ಕೋಟಿ ರೂ.ಗಳಲ್ಲಿ ಕಾರ್ಖಾನೆಯ ದುಡಿಯುವ ಬಂಡವಾಳಕ್ಕಾಗಿ 5.00 ಕೋಟಿ ರೂ.ಗಳನ್ನು (ಐದು ಕೋಟಿ ರೂ.ಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2010–11ನೇ ಸಾಲಿನ ಅನುದಾನದಲ್ಲಿ ಕಾರ್ಖಾನೆಯ ಯಂತ್ರೋಪಕರಣಗಳ ಆಧುನೀಕರಣ ಸಂಬಂಧ ಲೆಕ್ಕ ಶೀರ್ಷಿಕೆ "4860–04–190–1–00 (ಯೋಜನೆ) 211–ಹೂಡಿಕೆ" ಅಡಿಯಲ್ಲಿ ಒದಗಿಸಲಾಗಿರುವ ಅನುದಾನದಲ್ಲಿ 5.00 ಕೋಟಿ ರೂ.ಗಳನ್ನು ಬಿಡುಗಡೆಗೆ ಮಂಜೂರು ಮಾಡಲಾಗಿದೆ.

ಹಣ ಸೆಳೆಯುವ ಅಧಿಕಾರಿಯು ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ. ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ, ಆಗಿದ್ದು ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 1384 ವೆಚ್ಚ-1/2010, ದಿನಾಂಕ 16-08-2010ರಲ್ಲಿ ನೀಡಲಾದ ಸಹಮತಿಯಿಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಪಿ. ಆನಂದಕುಮಾರ್)**

ಪೀಠಾಧಿಕಾರಿ (ಸಕ್ಕರೆ)

ಪಿ.ಆರ್. 2243 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ** : ರೇಷ್ಮೆ ಇಲಾಖೆಯ ರೇಷ್ಮೆ ಪ್ರದರ್ಶಕರ ಹುದ್ದೆಗಳನ್ನು ರೇಷ್ಮೆ ನಿರೀಕ್ಷಕರ ಹುದ್ದೆಗಳಿಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ** : ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ : ಸಿಬ್ಬಂದಿ 1(8)ರೇಪ್ರದ/ಉನ್ನತೀ/165/2001-02, ದಿನಾಂಕ 13-02-2006, 07-06-2007, 01-08-2007, 07-12-2007, 10-01-2008, 15-04-2008, 26-06-2008 ಮತ್ತು 21-01-2009.

**ಪ್ರಸ್ತಾವನೆ :**

ಮೇಲೆ ಓದಲಾದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರಗಳಲ್ಲಿ ರೇಷ್ಮೆ ಕೃಷಿ ಆಯುಕ್ತರು 250 ರೇಷ್ಮೆ ಪ್ರದರ್ಶಕರ ಹುದ್ದೆಗಳನ್ನು ರೇಷ್ಮೆ ನಿರೀಕ್ಷಕರ ಹುದ್ದೆಗಳನ್ನಾಗಿ ಉನ್ನತೀಕರಿಸಲು ಇಲಾಖೆಯಿಂದ ಪ್ರಸ್ತಾವನೆಯನ್ನು ಈ ಹಿಂದೆ ಕಳುಹಿಸಿದ್ದ ಬಗ್ಗೆ ತಿಳಿಸಿ, 1979 ರಿಂದ 1983 ರಲ್ಲಿ ರೇಷ್ಮೆ ಪ್ರದರ್ಶಕರಾಗಿ ನೇರ ನೇಮಕಾತಿ ಹೊಂದಿದ ಕೆಲವರು ಅದೇ ಹುದ್ದೆಯಲ್ಲಿ ಮುಂದುವರೆದಿದ್ದು, ಅವರಿಗೆ ಕೆಲಸದಲ್ಲಿ ಚೈತನ್ಯ ತುಂಬಲು ಪದೋನ್ನತಿ ನೀಡುವುದು ಆಡಳಿತಾತ್ಮಕವಾಗಿ ಪೂರಕವೆಂದು ಅಭಿಪ್ರಾಯಪಟ್ಟು ಕರ್ನಾಟಕ ರಾಜ್ಯ ರೇಷ್ಮೆ ಇಲಾಖೆಯ ಸರ್ಕಾರಿ ತಾಂತ್ರಿಕ ನೌಕರರ ಸಂಘದ ಮನವಿಯಲ್ಲಿ ರೇಷ್ಮೆ ಪ್ರದರ್ಶಕರಿಗೆ ಮುಂಬಡ್ತಿ ಅವಕಾಶಕ್ಕಾಗಿ 600 ರೇಷ್ಮೆ ಪ್ರದರ್ಶಕರ ಹುದ್ದೆಗಳನ್ನು ರೇಷ್ಮೆ ನಿರೀಕ್ಷಕರ ಹುದ್ದೆಗೆ ಉನ್ನತೀಕರಿಸಲು ಕೋರಿರುವುದಾಗಿ ತಿಳಿಸಿ ರೇಷ್ಮೆ ಪ್ರದರ್ಶಕರು ಮುಂಬಡ್ತಿ ಇಲ್ಲದೇ ಒಂದೇ ಹುದ್ದೆಯಲ್ಲಿ ಸತತವಾಗಿ ಸೇವೆ ಸಲ್ಲಿಸಿರುವ ವಿವರಗಳನ್ನು ನೀಡಿ, ಸುಮಾರು 800 ರೇಷ್ಮೆ ಪ್ರದರ್ಶಕರು ಬಡ್ತಿ ಇಲ್ಲದೇ 20 ವರ್ಷಕ್ಕೂ ಹೆಚ್ಚು ಅವಧಿಯಿಂದ ಒಂದೇ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವುದರಿಂದ ಹಾಗೂ ಈ ಹುದ್ದೆಗಳ ಉನ್ನತೀಕರಣ ಅವಶ್ಯವಿರುವುದರಿಂದ 800 ರೇಷ್ಮೆ ಪ್ರದರ್ಶಕರ ಹುದ್ದೆಗಳನ್ನು ರೇಷ್ಮೆ ನಿರೀಕ್ಷಕರ ಹುದ್ದೆಗೆ ಉನ್ನತೀಕರುಸುವ ಕುರಿತು ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ರೇಷ್ಮೆ ಇಲಾಖೆಯ ಸಮಗ್ರ ಪುನರ್ ಸಂಘಟನೆಯ ವಿಷಯವು ಸರ್ಕಾರದ ಪರಿಶೀಲನೆಯಲ್ಲಿದೆ. ಸದರಿ ಪ್ರಸ್ತಾವನೆಯಲ್ಲಿ ರೇಷ್ಮೆ, ಪ್ರದರ್ಶಕರ ಹುದ್ದೆಗಳನ್ನು ರೇಷ್ಮೆ ನಿರೀಕ್ಷಕರ ಹುದ್ದೆಗೆ ಉನ್ನತೀಕರಿಸುವ ವಿಷಯದ ಕುರಿತಂತೆಯೂ ಸಮಗ್ರವಾಗಿ ಪರಿಶೀಲಿಸಲಾಗಿದ್ದು, 25 ವರ್ಷಗಳಿಂದ ರೇಷ್ಮೆ ಪ್ರದರ್ಶಕರ ಹುದ್ದೆಯಲ್ಲಿ ಯಾವುದೇ ಮುಂಬಡ್ತಿ ಇಲ್ಲದೇ ಕಾರ್ಯನಿರ್ವಹಿಸುತ್ತಿರುವ ನೌಕರರನ್ನು ಮುಂಬಡ್ತಿಗೆ ಪರಿಗಣಿಸಬೇಕಾದ ಅಗತ್ಯವಿದೆಯೆಂದು ಸರ್ಕಾರವು ಮನಗಂಡು ಈ ನಿಟ್ಟಿನಲ್ಲಿ 322 ರೇಷ್ಮೆ ಪ್ರದರ್ಶಕರ ಹುದ್ದೆಗಳನ್ನು ರೇಷ್ಮೆ ನಿರೀಕ್ಷಕರ ಹುದ್ದೆಗೆ ಉನ್ನತೀಕರಿಸಲು ಹಾಗೂ ಅಷ್ಟೇ ಸಂಖ್ಯೆಯ ರೇಷ್ಮೆ ನಿರೀಕ್ಷಕರ ಹುದ್ದೆಗಳನ್ನು ಹುದ್ದೆಗಳು ಲಭ್ಯವಿರುವ ಇತರೆ ಇಲಾಖೆಗಳಾದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ತೋಟಗಾರಿಕೆ ಮತ್ತು ಕೃಷಿ ಇಲಾಖೆ, ಸಕ್ಕರೆ ನಿರ್ದೇಶನಾಲಯ ಇತ್ಯಾದಿ ಇಲಾಖೆಗಳಿಗೆ ನಿಯೋಜಿಸಬೇಕೆಂದು ಷರತ್ತನ್ನು ವಿಧಿಸಿ ಉನ್ನತೀಕರಿಸುವ ಸಂಬಂಧ ಸರ್ಕಾರವು ತೀರ್ಮಾನಿಸಿದ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 01 ರೇಸೇವಿ 2007, ಬೆಂಗಳೂರು, ದಿನಾಂಕ: 20-08-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ರೇಷ್ಮೆ ಇಲಾಖೆಯಲ್ಲಿನ ವೇತನ ಶ್ರೇಣಿ ರೂ. 6250-12000ರ 322 ರೇಷ್ಮೆ ಪ್ರದರ್ಶಕರ ಹುದ್ದೆಗಳನ್ನು ಮಾತ್ರ ರೇಷ್ಮೆ ಪ್ರದರ್ಶಕರ ವೃಂದ ಬಲದಿಂದ ರೂ. 7275-13350ರ ವೇತನ ಶ್ರೇಣಿಯ ರೇಷ್ಮೆ ನಿರೀಕ್ಷಕರ ಹುದ್ದೆಗೆ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರವು ಉನ್ನತೀಕರಿಸಿದೆ.

1. ಉನ್ನತೀಕರಣದ ಸೌಲಭ್ಯವನ್ನು ಪಡೆಯುವ ಎಲ್ಲಾ 322 ರೇಷ್ಮೆ ಪ್ರದರ್ಶಕರು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ತೋಟಗಾರಿಕೆ ಮತ್ತು ಕೃಷಿ ಇಲಾಖೆ, ಸಕ್ಕರೆ ನಿರ್ದೇಶನಾಲಯ, ಇತ್ಯಾದಿ ಇಲಾಖೆಗಳಿಗೆ ನಿಯೋಜನೆ ಮೇಲೆ ತೆರಳಲು ಸಿದ್ಧರಿರುವ ಬಗ್ಗೆ ಮುಂಚಿತವಾಗಿ ಲಿಖಿತ ಮೂಲಕ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರಿಗೆ ಒಪ್ಪಿಗೆ ಪತ್ರ ನೀಡತಕ್ಕದ್ದು.
2. ಈ ಉನ್ನತೀಕರಣವು ಒಂದು ವರ್ಷಕ್ಕೆ ಸಿಂಧುವಾಗಿದ್ದು (ಗಿಚಿಟುಜ) ಈ ಅವಧಿಯೊಳಗೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಎಲ್ಲಾ ನೌಕರರ ನಿಯೋಜನೆಯ ಪ್ರಕ್ರಿಯೆಯನ್ನು ಪೂರ್ಣಗೊಳಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ/781/ವೆಚ್ಚ-1/2010, ದಿನಾಂಕ 22-6-2010ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಬಿ. ಡಿ. ಓಬಪ್ಪ)**

ಸರ್ಕಾರದ ಉಪ ಕಾರ್ಯದರ್ಶಿ (ರೇ.ಸ.)

ಪಿ.ಆರ್. 2244 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ** : ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಮಂಜೂರಾದ ಹೆಚ್ಚುವರಿ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 253 ಕೆಎಂಯು 2007, ದಿನಾಂಕ 28–05–2008.

2) ಪತ್ರ ಸಂಖ್ಯೆ : ಹವಿಪಪ್ರನಿಪ್ರಾ/ಹೊ/ಸಿಬ್ಬಂದಿ/09/2010–11/130, ದಿನಾಂಕ 20–04–2010.

**ಪ್ರಸ್ತಾವನೆ :**

ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಹೆಚ್ಚುವರಿಯಾಗಿ 17 ಹೊಸ ಹುದ್ದೆಗಳನ್ನು 2 ವರ್ಷಗಳ ಅವಧಿಗೆ ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸೃಜಿಸಲಾಗಿದೆ.

ಆಯುಕ್ತರು, ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ಇವರು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ತಾತ್ಕಾಲಿಕವಾಗಿ ಎರಡು ವರ್ಷಗಳ ಅವಧಿಗೆ ಮಂಜೂರಾದ ಹುದ್ದೆಗಳ ಅವಧಿಯು ದಿನಾಂಕ 28–05–2010 ರಂದು ಮುಕ್ತಾಯಗೊಂಡಿರುವುದರಿಂದ ಸದರಿ ಹುದ್ದೆಗಳನ್ನು ದಿನಾಂಕ 28–05–2010 ರಿಂದ ಪುನಃ 2 ವರ್ಷಗಳ ಅವಧಿಗೆ ಮುಂದುವರಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಆದರಂತೆ ಈ ಕೆಳಕಂಡ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 151 ಕೆಎಂಯು 2010, ಬೆಂಗಳೂರು, ದಿನಾಂಕ: 12–08–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಮಂಜೂರಾಗಿರುವ ಈ ಕೆಳಕಂಡ 17 ಹುದ್ದೆಗಳನ್ನು ದಿನಾಂಕ 28–05–2010 ರಿಂದ ಪುನಃ ಎರಡು ವರ್ಷಗಳ ಅವಧಿಗೆ ಮುಂದುವರೆಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆಗಳ ವಿವರ | ಹುದ್ದೆಗಳ ಸಂಖ್ಯೆ |
|---|---|---|
| 1 | ಅಧೀಕ್ಷಕರು | 1 |
| 2 | ಪ್ರಥಮ ದರ್ಜೆ ಸಹಾಯಕರು | 2 |
| 3 | ವಾಹನ ಚಾಲಕ | 2 |
| 4 | ಸಿವಿಲ್ ಇಂಜಿನಿಯರ್ | 2 |
| 5 | ಸರ್ವೇಯರ್ಸ್ | 2 |
| 6 | ಯೋಜನಾ ವ್ಯವಸ್ಥಾಪಕರು | 1 |
| 7 | ಸಂರಕ್ಷಣಾ ವಾಸ್ತುಶಿಲ್ಪಿ | 1 |
| 8 | ವಾಸ್ತುಶಿಲ್ಪಿ | 1 |
| 9 | ಆರ್ಕಿಯಾಲಜಿಸ್ಟ್ | 1 |
| 10 | ಸಾಂಸ್ಕೃತಿ ಸಮನ್ವಯ ಅಧಿಕಾರಿ | 1 |
| 11 | ಸಾಮಾಜಿಕ ಸಮನ್ವಯ ಅಧಿಕಾರಿ | 1 |
| 12 | GIS ವಿಶ್ಲೇಷಕರು | 1 |
| 13 | ಗ್ರಂಥಪಾಲಕರು | 1 |
| | **ಒಟ್ಟು** | **17** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ. ಕೆ. ಧರ್ಮರಾಜಪ್ಪ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು

ಪಿ.ಆರ್. 2245 ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ** : ಮೈನಿಂಗ್ ಮತ್ತು ಇತರೆ ಲಾರಿಗಳಿಂದ ಟೋಲ್ ಫೀ ಸಂಗ್ರಹಿಸುವ ಬಗ್ಗೆ

**ಓದಲಾಗಿದೆ** : ಸರ್ಕಾರದ ಆದೇಶ ಸಂಖ್ಯೆ : ಲೋಇ 111 ಸಿಎನ್‌ಹೆಚ್ 2009, ದಿನಾಂಕ 15–10–2009

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರಿ ಆದೇಶ ದಿನಾಂಕ 15–10–2009ರಲ್ಲಿ ಕಬ್ಬಿಣದ ಅದಿರು, ಮರ, ಗ್ರಾನೈಟ್ ಹಾಗೂ ಮರಳನ್ನು ಸಾಗಿಸುವ ವಾಹನಗಳಿಗೆ ಪ್ರತಿ ವಾಹನಕ್ಕೆ ಪ್ರತಿ ಟ್ರಿಪ್ಪಿಗೆ ಈ ಕೆಳಕಂಡಂತೆ ಟೋಲ್ ವಿಧಿಸಲು ಮತ್ತು ಟೋಲ್ ವಿಧಿಸಬಹುದಾದ ಮಾರ್ಗಗಳನ್ನು ಗುರುತಿಸಿ ಸರ್ಕಾರದ ಅನುಮೋದನೆ ಪಡೆದು ಅನುಷ್ಠಾನಗೊಳಿಸಲು ಕ್ರಮಕೈಗೊಳ್ಳುವುದು ಎಂದು ಆದೇಶಿಸಲಾಗಿದೆ.

| | | |
|---|---|---|
| ಅದಿರು ಸಾಗಾಣಿಕೆಗೆ | .. | ರೂ. 1000 |
| ಗ್ರಾನೈಟ್ ಹಾಗೂ ಮರ ಸಾಗಾಣಿಕೆಗೆ | .. | ರೂ. 500 |
| ಮರಳು ಸಾಗಾಣಿಕೆಗೆ | .. | ರೂ. 200 |

2010–11ನೇ ಆಯವ್ಯಯದಲ್ಲಿ ಯಂತ್ರೋಪಕರಣಗಳನ್ನು ಹೊರತುಪಡಿಸಿ ಇತರೆ ಸಾಮಗ್ರಿಗಳನ್ನು ತುಂಬಿದ 16 ಟನ್‌ಗಳಿಗಿಂತಲೂ ಹೆಚ್ಚಿನ ಭಾರವಿರುವ ಪ್ರತಿಯೊಂದು ವಾಹನಕ್ಕೆ ಪ್ರತಿಬಾರಿಗೆ ರೂ. 500 ರಂತೆ ರಸ್ತೆ ಶುಲ್ಕ ವಿಧಿಸಲು ಪ್ರಸ್ತಾವಿಸಲಾಗಿದೆ.

ಟೋಲ್ ಪ್ಲಾಜಾಗಳನ್ನು ನಿರ್ಮಿಸುವ ಮಾರ್ಗಗಳನ್ನು ಗುರುತಿಸಲು ಮೆ॥ E.L. Technologies Pvt. Ltd. ನೀಡಿರುವ ವರದಿ ಮತ್ತು ಸರ್ಕಾರದ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ದಿನಾಂಕ 27–10–2009ರ ಸಭೆಯಲ್ಲಿ ಮೈಸೂರು ಜಿಲ್ಲೆಯ ತಿ.ನರಸೀಪುರ, ತಲಕಾಡು, ಚಾಮರಾಜನಗರ ಜಿಲ್ಲೆಯ ಚಾಮರಾಜನಗರ ಹಾಗೂ ಕೊಳ್ಳೇಗಾಲ ಪ್ರದೇಶದಲ್ಲಿ ಗುರುತಿಸಲಾದ 37 ರಸ್ತೆಗಳಲ್ಲಿ 26 ಟೋಲ್ ಪ್ಲಾಜಾಗಳನ್ನು ಹಾಗೂ ಬಳ್ಳಾರಿ ಜಿಲ್ಲೆಯ ಬಳ್ಳಾರಿ, ಸಂಡೂರು ಹಾಗೂ ಹೊಸಪೇಟೆ ಪ್ರದೇಶದಲ್ಲಿ ಗುರುತಿಸಲಾಗಿರುವ 10 ಟೋಲ್ ಪ್ಲಾಜಾ ನಿರ್ಮಿಸಲು ತೀರ್ಮಾನಿಸಲಾಯಿತು. ಸ್ಥಳ ವಿವರಗಳು ಅನುಬಂಧದಲ್ಲಿರುತ್ತದೆ.

ಮೇಲ್ಕಂಡ ವಸ್ತುಗಳನ್ನು ಸಾಗಿಸುವ ವಾಹನಗಳಿಂದ ಟೋಲ್ ಶುಲ್ಕ ಸಂಗ್ರಹಿಸುವ ಹಕ್ಕನ್ನು ಟೆಂಡರ್ ಆಧಾರದ ಮೇಲೆ ಖಾಸಗಿ ಗುತ್ತಿಗೆದಾರರಿಗೆ ವಹಿಸುವುದು, ಗುತ್ತಿಗೆದಾರರ ಮೂಲಕ ವಸೂಲಿ ಮಾಡಲಾದ ಶುಲ್ಕದಲ್ಲಿ ಶೇ. 10ರಷ್ಟು ಸಂಬಂಧಪಟ್ಟ ಗ್ರಾಮ ಪಂಚಾಯತಿಗಳಿಗೆ ಉತ್ತೇಜನ ಅನುದಾನವಾಗಿ ನೀಡಲು ಪ್ರಸ್ತಾಪಿಸಲಾಗಿದೆ.

ಮೇಲಿನ ಕಂಡಿಕೆಗಳ ಹಿನ್ನೆಲೆಯಲ್ಲಿ ಮೇಲೆ ಗುರುತಿಸಲಾದ ಸ್ಥಳಗಳಲ್ಲಿ ಟೋಲ್ ಪ್ಲಾಜ ನಿರ್ಮಿಸಲು ಮತ್ತು ಇತರೆ ವಿಷಯಗಳ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 111 ಸಿಎನ್‌ಹೆಚ್ 2009, ಬೆಂಗಳೂರು, ದಿನಾಂಕ: 1–7–2010**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಸರ್ಕಾರಿ ಆದೇಶ ಸಂಖ್ಯೆ ಲೋಇ 111 ಸಿಎನ್‌ಹೆಚ್ 2009 ದಿನಾಂಕ 15–10–2009ನ್ನು ಹಿಂದಕ್ಕೆ ಪಡೆದು 2010–11ರ ಆಯವ್ಯಯದಲ್ಲಿ ಯಂತ್ರೋಪಕರಣಗಳನ್ನು ಹೊರತುಪಡಿಸಿ ಇತರೆ ಸಾಮಗ್ರಿಗಳನ್ನು ತುಂಬಿದ 16 ಟನ್‌ಗಳಿಗಿಂತಲೂ ಹೆಚ್ಚಿನ ಭಾರವಿರುವ ಪ್ರತಿಯೊಂದು ವಾಹನಕ್ಕೆ ಪ್ರತಿಬಾರಿಗೆ ರೂ. 500 ರಂತೆ ರಸ್ತೆ ಶುಲ್ಕ ವಿಧಿಸಲು ಆದೇಶಿಸಿದೆ.

ಅನುಬಂಧದಲ್ಲಿರುವಂತೆ ಮೈಸೂರು ಜಿಲ್ಲೆಯ ತಿ.ನರಸೀಪುರ, ತಲಕಾಡು, ಚಾಮರಾಜನಗರ ಜಿಲ್ಲೆಯ ಚಾಮರಾಜನಗರ ಹಾಗೂ ಕೊಳ್ಳೇಗಾಲ ಪ್ರದೇಶದಲ್ಲಿ ಗುರುತಿಸಲಾದ 37 ರಸ್ತೆಗಳಲ್ಲಿ 26 ಟೋಲ್ ಪ್ಲಾಜಾ ಹಾಗೂ ಬಳ್ಳಾರಿ ಜಿಲ್ಲೆಯ ಬಳ್ಳಾರಿ, ಸಂಡೂರು ಹಾಗೂ ಹೊಸಪೇಟೆ ಪ್ರದೇಶದಲ್ಲಿ ಗುರುತಿಸಲಾಗಿರುವ 10 ರಸ್ತೆಗಳಲ್ಲಿ 10 ಟೋಲ್ ಪ್ಲಾಜಾ ನಿರ್ಮಿಸಲು ಹಾಗೂ ಟೋಲ್ ಶುಲ್ಕ ಸಂಗ್ರಹಿಸುವ ಹಕ್ಕನ್ನು ಟೆಂಡರ್ ಆಧಾರದ ಮೇಲೆ ಖಾಸಗಿ ಗುತ್ತಿಗೆದಾರರಿಗೆ ವಹಿಸಲು ಆದೇಶಿಸಲಾಗಿದೆ.

ಗುತ್ತಿಗೆದಾರರು ಸರ್ಕಾರಕ್ಕೆ ನೀಡಿರುವ ಶುಲ್ಕದ ಮೊತ್ತವನ್ನು ಲೆಕ್ಕಶೀರ್ಷಿಕೆ 1054–00–800–0–09 ಅಡಿ ಜಮಾ ಮಾಡಿ ರಸ್ತೆಗಳ ಅಭಿವೃದ್ಧಿಗಾಗಿ ಲೆಕ್ಕಶೀರ್ಷಿಕೆ 3054–80–797–0–04 ಮೂಲಕ ಕಾಯ್ದಿಟ್ಟ ನಿಧಿಗೆ (8229–00–200–0–20) ವರ್ಗಾಯಿಸಿ ರಸ್ತೆ ಅಭಿವೃದ್ಧಿ ವೆಚ್ಚ ಮಾಡಬಹುದೆಂದು ಆದೇಶಿಸಿದೆ.

ಮೇಲ್ಕಂಡ ವಸ್ತುಗಳನ್ನು ಸಾಗಿಸುವ ವಾಹನಗಳಿಂದ ಗುತ್ತಿಗೆದಾರರ ಮೂಲಕ ವಸೂಲಿ ಮಾಡಲಾದ ಶುಲ್ಕದಲ್ಲಿ ಶೇ. 10ರಷ್ಟು ಸಂಬಂಧಪಟ್ಟ ಗ್ರಾಮ ಪಂಚಾಯತಿಗಳಿಗೆ ಉತ್ತೇಜಕ ಅನುದಾನವಾಗಿ ನೀಡಲು ಆದೇಶಿಸಿದೆ.

ಟೋಲ್ ಪ್ಲಾಜಾಗಳನ್ನು ನಿರ್ಮಿಸುವ ವೆಚ್ಚವನ್ನು ಲೆಕ್ಕಶೀರ್ಷಿಕೆ 5054–ORF ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : PWD 414 FC–1/2010 ದಿನಾಂಕ 29–6–2010ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್. ಆರ್. ರೇವಣ್ಣ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಮತ್ತು

ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

**ಅನುಬಂಧ**

**ಟೋಲ್ ಪ್ಲಾಜಾ ನಿರ್ಮಿಸಲು ಉದ್ದೇಶಿಸಿರುವ ರಸ್ತೆ ಮತ್ತು ಸ್ಥಳದ ಹೆಸರು**

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಟೋಲ್ ಪ್ಲಾಜಾ ನಿರ್ಮಿಸುವ ಸ್ಥಳ |
|---|---|---|
| 1 | ಕೊರಟಗೆರೆ–ಬವಲಿ ರಸ್ತೆ (ರಾಜ್ಯ ಹೆದ್ದಾರಿ–33) | ಬುಹತಹಳ್ಳಿ |
| 2 | ಮಳವಳ್ಳಿ–ಬಿ.ಜಿ. ಪುರ (ಎಂ.ಡಿ.ಆರ್) | ಸಿರಮೆಹಳ್ಳಿ |
| 3 | ಎಸ್‌ಆರ್‌ಪಿ–ಸೊಸಲೆ–ಶಿವನಸಮುದ್ರ ರಸ್ತೆ (ಎಂ.ಡಿ.ಆರ್.) | ಜವನಗಹಳ್ಳಿ |
| 4 | ಮಳವಳ್ಳಿ–ಬೆಂಗಳೂರು (ರಾಷ್ಟ್ರೀಯ ಹೆದ್ದಾರಿ–209) | ಕ್ಯಾತೆಗೌಡನದೊಡ್ಡಿ |
| 5 | ಉತ್ತಂಬಳ್ಳಿ–ಯಳಂದೂರು | ಮಾಂಬಳ್ಳಿ |
| 6 | ಕೊಳ್ಳೇಗಾಲ–ಮಳವಳ್ಳಿ | ಸತ್ತೇಗಾಲ |
| 7 | ಎಸ್‌ಆರ್‌ಪಿ–ಮಲ್ಲೆ ಮಹದೇಶ್ವರ ಬೆಟ್ಟ–ರಾಜ್ಯ ಹೆದ್ದಾರಿ–79 | ಸೋಸಲೆ |

| | | |
|---|---|---|
| 8 | ಎಸ್ಆರ್‌ಪಿ–ಮಲೈ ಮಹದೇಶ್ವರ ಬೆಟ್ಟ–ರಾಜ್ಯ ಹೆದ್ದಾರಿ–79 | ಚಿನ್ನಾಯಕನಹಳ್ಳಿ |
| 9 | ಸಿರಾ–ನಂಜನಗೂಡು ರಸ್ತೆ (ರಾಜ್ಯ ಹೆದ್ದಾರಿ–84) | ಹೊಸೂರು |
| 10 | ನಂಜನಗೂಡು–ಮೈಸೂರು | ಚಿಕ್ಕಯ್ಯನ ಛತ್ರ |
| 11 | ಮೈಸೂರು–ತಿ.ನರಸೀಪುರ | ಮೇಗಲಪುರ |
| 12 | ಗರ್ಗೇಶ್ವರಿ–ರಂಗಸಮುದ್ರ ರಸ್ತೆ (ಎಂ.ಡಿ.ಆರ್.) | ಮುತ್ತತ್ತಿ |
| 13 | ಗರ್ಗೇಶ್ವರಿ–ರಂಗಸಮುದ್ರ ರಸ್ತೆ (ಎಂ.ಡಿ.ಆರ್.) | ರಂಗಸಮುದ್ರ |
| 14 | ಗರ್ಗೇಶ್ವರಿ–ರಂಗಸಮುದ್ರ ರಸ್ತೆ (ಎಂ.ಡಿ.ಆರ್.) | ಬನ್ನೂರು |
| 15 | ವರುಣ–ಹೊಸಕೋಟೆ ರಸ್ತೆ (ರಾಜ್ಯ ಹೆದ್ದಾರಿ–84ಎ) | ದಂಡಿಕೆರೆ |
| 16 | ಶ್ರೀರಂಗಪಟ್ಟಣ–ಮಲೈ ಮಹದೇಶ್ವರ ಬೆಟ್ಟ–ರಾಜ್ಯ ಹೆದ್ದಾರಿ–79 | ನೆಲಸೋಗೆ |
| 17 | ಶ್ರೀರಂಗಪಟ್ಟಣ–ಮಲೈ ಮಹದೇಶ್ವರ ಬೆಟ್ಟ–ರಾಜ್ಯ ಹೆದ್ದಾರಿ–79 | ಹೊಸಹಂಪಾಪುರ |
| 18 | ಚಾಮರಾಜನಗರ–ತಿ.ನರಸೀಪುರ | ಬನಹಳ್ಳಿ |
| 19 | ನಂಜನಗೂಡು–ಬಂಡೀಪುರ | ಹೊಸಹಳ್ಳಿ |
| 20 | ಯಳಂದೂರು–ಗುಂಡ್ಲುಪೇಟೆ ರಸ್ತೆ (ರಾಜ್ಯ ಹೆದ್ದಾರಿ–81) | ಉದಿಗಾಲ |
| 21 | ಯಳಂದೂರು–ಗುಂಡ್ಲುಪೇಟೆ ರಸ್ತೆ (ರಾಜ್ಯ ಹೆದ್ದಾರಿ–81) | ತೆರಕನಾಂಬಿ |
| 22 | ನಂಜನಗೂಡು–ಬಿಳಿಗಿರಿರಂಗನ ಬೆಟ್ಟ (ರಾಜ್ಯ ಹೆದ್ದಾರಿ–80) | ಚಿನ್ನದ ಗುಡಿ ಹುಂಡಿ |
| 23 | ನಂಜನಗೂಡು–ಬಿಳಿಗಿರಿರಂಗನ ಬೆಟ್ಟ (ರಾಜ್ಯ ಹೆದ್ದಾರಿ–80) | ಚಾಮರಾಜನಗರ |
| 24 | ಬಾಗಲಕೋಟೆ–ಬಿಳಿಗಿರಿರಂಗನ ಬೆಟ್ಟ (ರಾಜ್ಯ ಹೆದ್ದಾರಿ–87) | ಮಡಹಳ್ಳಿ |
| 25 | ರಾಷ್ಟ್ರೀಯ ಹೆದ್ದಾರಿ–209 | ಅಂಕನಶೆಟ್ಟಿಪುರ |
| 26 | ರಾಷ್ಟ್ರೀಯ ಹೆದ್ದಾರಿ–212 | ಬಸವಪುರ |
| 27 | ಶ್ರೀರಂಗಪಟ್ಟಣ–ಜೇವರ್ಗಿ ರಸ್ತೆ (ರಾಜ್ಯ ಹೆದ್ದಾರಿ–19) | ಕಿ.ಮೀ. 337–00 |
| 28 | ಶ್ರೀರಂಗಪಟ್ಟಣ–ಜೇವರ್ಗಿ ರಸ್ತೆ (ರಾಜ್ಯ ಹೆದ್ದಾರಿ–19) | ಕಿ.ಮೀ. 324–00 |
| 29 | ಮೈಲಾರಿ–ತೋರಣಗಲ್ಲು ರಸ್ತೆ (ರಾಜ್ಯ ಹೆದ್ದಾರಿ–40) | ಕಿ.ಮೀ. 129–00 |
| 30 | ರಾಷ್ಟ್ರೀಯ ಹೆದ್ದಾರಿ–63 ರಿಂದ ಮೆಟ್ರಿಕಿ | ಕಿ.ಮೀ. 5–00 |
| 31 | ಹಂಪಿ–ಹೆಚ್.ಬಿ.ಹಳ್ಳಿ ರಸ್ತೆ (ರಾಜ್ಯ ಹೆದ್ದಾರಿ–131) | ಕಿ.ಮೀ. 64–00 |
| 32 | ಸಂಡೂರು–ಹೊಸಪೇಟೆ ರಸ್ತೆ (ರಾಜ್ಯ ಹೆದ್ದಾರಿ–49) | ಕಿ.ಮೀ. 26–20 |
| 33 | ಮೈಲಾರ–ತೋರಣಗಲ್ಲು ರಸ್ತೆ (ರಾಜ್ಯ ಹೆದ್ದಾರಿ–40) | ಕಿ.ಮೀ. 110–00 |
| 34 | ಮೈಲಾರ–ತೋರಣಗಲ್ಲು ರಸ್ತೆ (ರಾಜ್ಯ ಹೆದ್ದಾರಿ–40) | ಕಿ.ಮೀ. 151–00 |
| 35 | ಕೊಡ್ಲಿಗಿ–ತುಂಬರಗುಡ್ಡಿ ರಸ್ತೆ | ಕಿ.ಮೀ. 0–50 |
| 36 | ದೇವದುರ್ಗ–ಚೋರನೂರು ರಸ್ತೆ | ಕಿ.ಮೀ. 8–00 |

**(ಎಸ್. ಆರ್. ರೇವಣ್ಣ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ತಿದ್ದುಪಡಿ

ಸಂಖ್ಯೆ : ಲೋಇ 111 ಸಿಎನ್‌ಹೆಚ್ 2009, ಬೆಂಗಳೂರು, ದಿನಾಂಕ 29–7–2010

**ವಿಷಯ** : ಮೈನಿಂಗ್ ಮತ್ತು ಇತರೆ ಲಾರಿಗಳಿಂದ ಟೋಲ್ ಫೀ ಸಂಗ್ರಹಿಸುವ ಬಗ್ಗೆ

**ಓದಲಾಗಿದೆ** : ಸರ್ಕಾರದ ಆದೇಶ ಸಂಖ್ಯೆ : ಲೋಇ 111 ಸಿಎನ್‌ಹೆಚ್ 2009, ದಿನಾಂಕ 1–7–2009

***

ಸರ್ಕಾರದ ಆದೇಶ ಸಂಖ್ಯೆ : ಲೋ ಇ 111 ಸಿಎನ್‌ಹೆಚ್ 2009, ದಿನಾಂಕ 1–7–2010ರ ಆದೇಶದ 2ನೇ ಪ್ಯಾರಾದ ಕೊನೆಯಲ್ಲಿ ಟೋಲ್ ಶುಲ್ಕ ಸಂಗ್ರಹಿಸುವ ಹಕ್ಕನ್ನು ಟೆಂಡರ್ ಆಧಾರದ ಮೇಲೆ ಖಾಸಗಿ ಗುತ್ತಿಗೆದಾರರಿಗೆ ವಹಿಸಲು ಆದೇಶಿಸಲಾಗಿದೆ ಎಂಬುದರ ಮುಂದೆ **"ಖಾಸಗಿ ಗುತ್ತಿಗೆದಾರರನ್ನು ನೇಮಕ ಮಾಡುವವರಿಗೆ ಇಲಾಖಾ ವತಿಯಿಂದಲೇ ಟೋಲ್ ಶುಲ್ಕ ಸಂಗ್ರಹಿಸುವ ಬಗ್ಗೆ ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಸ್. ಆರ್. ರೇವಣ್ಣ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

ಪಿ.ಆರ್. 2246

**ಕಂದಾಯ ಸಚಿವಾಲಯ**

**ವಿಷಯ** : ಗ್ರಾಮ ಸ್ಥಳಾಂತರಕ್ಕಾಗಿ ಬಾಗಲಕೋಟೆ ಜಿಲ್ಲೆಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ** : ಮಾನ್ಯ ಮುಖ್ಯಮಂತ್ರಿಗಳ ಟಿಪ್ಪಣಿ ಸಂಖ್ಯೆ : SCM.913/10, ದಿನಾಂಕ 12-08-2010.

**ಪ್ರಸ್ತಾವನೆ :**

ಆಸರೆ ಯೋಜನೆ ಅಡಿಯಲ್ಲಿ ನೆರೆ ಪೀಡಿತವಾದ ಜಿಲ್ಲೆಗಳಾದ ಬಾಗಲಕೋಟೆ, ಬಿಜಾಪುರ, ಗದಗ್ ಜಿಲ್ಲೆಗಳಲ್ಲಿ ಮನೆ ಕಟ್ಟಿಸುವ ಕಾರ್ಯವನ್ನು ಮೆ॥ ಮೈಸೂರು ನಾಗರಿಕರ ವೇದಿಕೆ, ಜೆ.ಎಸ್.ಎಸ್. ಮಹಾ ವಿದ್ಯಾಪೀಠ, ಮೈಸೂರು ಇವರಿಗೆ ವಹಸಲಾಗಿದೆ.

ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರು ದಿನಾಂಕ 15-6-2010ರಂದು ರೂ. 1.00 ಕೋಟಿಗಳನ್ನು ಹಾಗೂ ಅಕ್ಕ ಚಾರಿಟಿಬಲ್ ಫೌಂಡೇಷನ್ ಯು.ಎಸ್.ಎ. ಇವರು ರೂ. 25.00 ಲಕ್ಷಗಳನ್ನು ಕರ್ನಾಟಕ ಪ್ರಕೃತಿ ವಿಕೋಪ ಪರಿಹಾರ ನಿಧಿಗೆ ದೇಣಿಗೆ ನೀಡಿರುತ್ತಾರೆ. ಸದರಿ ಮೊತ್ತವನ್ನು ಮೈಸೂರು ನಾಗರೀಕ ವೇದಿಕೆ ವತಿಯಿಂದ ಆಸರೆ ಮನೆಗಳ ನಿರ್ಮಾಣಕ್ಕಾಗಿ ನೀಡಬೇಕೆಂದು ದಿನಾಂಕ 6-7-2010ರ ಪತ್ರದಲ್ಲಿ ಸದರಿ ಸಂಸ್ಥೆಯವರು ತಿಳಿಸಿರುತ್ತಾರೆ.

ಕರ್ನಾಟಕ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ಇವರಿಗೆ ರೂ. 1.25 ಕೋಟಿ ಹಣವನ್ನು ಬಿಡುಗಡೆ ಮಾಡಲು ಮಾನ್ಯ ಮುಖ್ಯಮಂತ್ರಿಗಳು ಉಲ್ಲೇಖಿತ ಟಿಪ್ಪಣಿಯಲ್ಲಿ ಅನುಮೋದನೆ ನೀಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 79 ಟಿಎನ್‌ಆರ್ 2010, ಬೆಂಗಳೂರು, ದಿನಾಂಕ: 13-8-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉತ್ತರ ಕರ್ನಾಟಕದ ಜಿಲ್ಲೆಗಳಾದ ಬಾಗಲಕೋಟೆ, ಬಿಜಾಪುರ, ಗದಗ ಜಿಲ್ಲೆಗಳಲ್ಲಿ ಪ್ರವಾಹದಿಂದ ಪೀಡಿತವಾದ ಗ್ರಾಮಗಳನ್ನು ಸ್ಥಳಾಂತರಿಸಿ ನೆರೆಸಂತ್ರಸ್ಥರಿಗೆ ಮನೆಗಳನ್ನು ಕಟ್ಟಿಸಿಕೊಡಲು ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ ಇವರಿಗೆ ರೂ. 1.25 ಕೋಟಿ (ರೂಪಾಯಿ ಒಂದು ಕೋಟಿ ಇಪ್ಪತ್ತೈದು ಲಕ್ಷ ಮಾತ್ರ) ಗಳನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಲೆಕ್ಕ ಶೀರ್ಷಿಕೆ 8235-00-111-0-02 Public Contributions to the Calamity Relief ಅಡಿಯಲ್ಲಿ ಭರಿಸುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಲೆಕ್ಕ ಶೀರ್ಷಿಕೆ 8235-00-111-0-02 Public Contributions to the Calamity Relief ನಿಂದ ಜಿಲ್ಲಾ ಖಜಾನೆಯಲ್ಲಿರುವ ಜಿಲ್ಲಾಧಿಕಾರಿಗಳು ಬಾಗಲಕೋಟೆ ಜಿಲ್ಲೆ ಇವರ Miscellaneous Deposit Account Public Contributions to the Calamity Relief ಖಾತೆಗೆ ಟಿ.ಟಿ.ಆರ್. ಮೂಲಕ ವರ್ಗಾವಣೆ ಮಾಡಲು ಆದೇಶಿಸಿದೆ.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ ಇವರು ಪೇಯಿಸ್ ರಸೀದಿ ಬಿಲ್ಲು (ಸಿಟಿಎಸ್-8) ತಯಾರಿಸಿ ಮೇಲು ರುಜು ಮಾಡಿ. ಚಲನ್ ಲಗತ್ತಿಸಿ ಜಿಲ್ಲಾ ಖಜಾನೆಗೆ ಸಲ್ಲಿಸುವುದು. ಬಾಗಲಕೋಟೆ ಜಿಲ್ಲೆಯ ಜಿಲ್ಲಾ ಖಜಾನಾಧಿಕಾರಿಗಳು ಈ ಮೊತ್ತವನ್ನು ಮೇಲೆ ತಿಳಿಸಿದಂತೆ ಲೆಕ್ಕ ಶೀರ್ಷಿಕೆ 8235-00-111-0-02 Public Contributions to the Calamity Relief ನಿಂದ ಟಿ.ಟಿ.ಆರ್. ಮೂಲಕ ಜಿಲ್ಲಾ ಖಜಾನೆಯಲ್ಲಿರುವ ಜಿಲ್ಲಾಧಿಕಾರಿಗಳ Miscellaneous Deposit Account Public Contributions to the Calamity Relief Fund ಖಾತೆಗೆ ವರ್ಗಾವಣೆ ಮಾಡತಕ್ಕದ್ದು.

ಈ ಅನುದಾನವನ್ನು ಜಿಲ್ಲಾಧಿಕಾರಿಗಳು ಬಾಗಲಕೋಟೆ ಜಿಲ್ಲೆ ಇವರು ಪುನರ್ವಸತಿ ಕಾರ್ಯಕ್ಕಾಗಿ (ಮನೆ ಕಟ್ಟಿಸಲು) ಅವಶ್ಯಕತೆಗನುಗುಣವಾಗಿ ನಾಗರೀಕ ವೇದಿಕೆ ಜೆ.ಎಸ್.ಎಸ್. ವಿದ್ಯಾಪೀಠ ಇವರು ಬಾಗಲಕೋಟೆ, ಬಿಜಾಪುರ, ಗದಗ ಜಿಲ್ಲೆಗಳಲ್ಲಿ ಪ್ರವಾಹದಿಂದ ಪೀಡಿತವಾದ ಸ್ಥಳಾಂತರಗೊಳ್ಳಲಿರುವ ಗ್ರಾಮಗಳಲ್ಲಿ ಮನೆಗಳನ್ನು ಕಟ್ಟಿಸಲು ಅವಶ್ಯಕತೆಗನುಗುಣವಾಗಿ ಉಪಯೋಗಿಸುವುದು.

ಈ ಅನುದಾನವನ್ನು ಯಾವ ಉದ್ದೇಶಕ್ಕೆ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಉಪಯೋಗಿಸುವುದು.

ಮಾನ್ಯ ಮುಖ್ಯ ಮಂತ್ರಿಯವರ ಟಿಪ್ಪಣಿ ಸಂಖ್ಯೆ : SCM/913/10 ದಿನಾಂಕ 12-8-2010ರಲ್ಲಿ ನೀಡಿರುವ ಅನುಮೋದನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಟಿ. ಗಂಗಾಧರ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ
(ವಿಪತ್ತು ನಿರ್ವಹಣೆ ಮತ್ತು ಸೇವೆಗಳು-2)

ಪಿ.ಆರ್. 2247

## INFRASTRUCTURE DEVELOPMENT SECRETARIAT

Sub: Release of funds towards cost sharing Railway projects- Kotturu-Harihar new broad gauge Railway line project.

Read:
1. G.O. No. IDD 1 NSW 2002 dated 22-03-02.
2. G.O. No. IDD 47 NSW 2003 (P) dated 26-03-04.
3. G.O. No. IDD 51 NSW 2004 dated 19-07-04.
4. G.O. No. IDD 98 NSW 2003 dated 21-10-06.
5. G.O. No. IDD 98 NSW 2003 dated 20-12-06.
6. G.O. No. IDD 98 NSW 2003 dated 05-09-07.
7. G.O. No. IDD 15 NSW 2008 dated 22-10-08.
8. G.O. No. IDD 15 NSW 2008 dated 17-12-08.
9. G.O. No. IDD 15 NSW 2008 dated 20-01-09.
10. G.O. No. IDD 15 NSW 2008 dated 04-08-09.

11. G.O. No. IDD 15 NSW 2008 dated 20-03-10.
12. G.O. No. IDD 15 NSW 2008 dated 21-06-10.
13. Letter No. W. 63/CN/BNC/MR/B/GL dated 28-07-2010 of Chief Engineer (Con) SWR, Bangalore.

**Preamble:**

In the Government Orders referred to at Sl. No. (1) to (12) above Government of Karnataka has so far released an amount of Rs. 205.17 crore towards cost sharing for Kotturu-Harihar New Railway line project.

2. The Chief Engineer, South Western Railway, Bangalore in his letter read at Sl. No. (13) above, has stated there is cost escalation and that the earlier cost of Rs. 304.65 crore is likely to increase to Rs. 326.00 crores and the share of Government of Karnataka will be Rs. 217.33 crores. Money deposited by Government of Karnataka so far is Rs. 205.17 crores. Hence, he has requested to deposit the balance 2/3 share of Government of Karnataka. i.e. Rs. 12.16 crores immediately towards Kotturu-Harihar new Railway line project.

3. The proposal of Railways has been examined and it has been decided to release an amount of Rs. 12.16 crore out of the Budget of Rs. 272.50 crore provided under the Head of Account "5465-01-190-3-05 (Plan) 211 investment towards cost sharing for new Railway line projects during 2010-2011. Hence this order.

**GOVERNMENT ORDER NO. IDD 15 NSW 2008, BANGALORE DATED 21-08-2010**

After careful examination of the request of Railways, Government are pleased to release an amount of Rs. 12.16 crore (Rupees Twelve Crore Sixteen Lakhs only) towards Kotturu-Harihar new Railway line being the part of the balance 2/3rd share of Government of Karnataka and the above expenditure shall be met under the Head of Account "5465-01-190-3-05 (Plan) 211 investment" out of the budget provision Rs. 272.50 crore towards cost sharing for new railway projects during 2010-11.

2. The Chief Executive Officer, K-RIDE is authorized to draw the amount on a payee's receipt duly countersigned by the Under Secretary to Government, Infrastructure Development Department and K-RIDE shall in turn deposit the same with the Financial Advisor and Chief Accounts Officer (Construction), South Western Railway, Bangalore.

3. This order is issued with the concurrence of Finance Department vide U.O. Note. No. FD 1369 Exp-1/2010 dated 11-08-2010.

By Order and in the name of the Governor of Karnataka

**C.A. BABURAVINDRANATH PATEL**

Under Secretary to Government,

Infrastructure Development Department

P.R. No. 2258

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಸಾದಿಲ್ವಾರು ವೆಚ್ಚದಲ್ಲಿ ವೇತನ ಪಡೆಯುತ್ತಿರುವ ಪೂರ್ಣಕಾಲಿಕ ನೌಕರರ ನಿವೃತ್ತಿ ವಯಸ್ಸನ್ನು 60 ವರ್ಷಗಳಿಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ** :
1. ದಿನಾಂಕ 31–07–1985ರ ಅಧಿಕೃತ ಜ್ಞಾಪನ ಸಂಖ್ಯೆ : ಡಿಪಿಎಆರ್ 18 ಎಸ್‌ಡಿಇ 85.
2. ಆದೇಶ ಸಂಖ್ಯೆ : ಸಿಆಸುಇ 44 ಸೇನಿಸಿ 2008, ದಿನಾಂಕ : 28–07–2008.

**ಪ್ರಸ್ತಾವನೆ:**

ಸರ್ಕಾರಿ ನೌಕರರ ನಿವೃತ್ತಿ ವಯಸ್ಸನ್ನು ದಿನಾಂಕ 18–07–2008 ರಿಂದ ಜಾರಿಗೆ ಬರುವಂತೆ 58 ರಿಂದ 60 ವರ್ಷಗಳಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ 28–07–2008ರ ಆದೇಶದಲ್ಲಿ ಹೆಚ್ಚಿಸಲಾಗಿದೆ ಈ ಹಿಂದೆ 1984ರಲ್ಲಿ ಸರ್ಕಾರಿ ನೌಕರರ ನಿವೃತ್ತಿ ವಯಸ್ಸನ್ನು 55 ರಿಂದ 58 ವರ್ಷಗಳಿಗೆ ಹೆಚ್ಚಿಸಲಾಗಿದ್ದ ಸಂದರ್ಭದಲ್ಲಿ ಉಲ್ಲೇಖ (1)ರಲ್ಲಿ ಓದಲಾದ ದಿನಾಂಕ 31–07–1985ರ ಅಧಿಕೃತ ಜ್ಞಾಪನದಲ್ಲಿ ಸಾದಿಲ್ವಾರು ವೆಚ್ಚದಿಂದ ವೇತನ ಪಡೆಯುತ್ತಿರುವ ಪೂರ್ಣಕಾಲಿಕ ನೌಕರರ ನಿವೃತ್ತಿಯ ವಯಸ್ಸನ್ನು 55 ರಿಂದ 58 ವರ್ಷಕ್ಕೆ ಹೆಚ್ಚಿಸಲಾಗಿತ್ತು.

ಸರ್ಕಾರಿ ನೌಕರರ ನಿವೃತ್ತಿಯ ವಯಸ್ಸನ್ನು ಮೇಲೆ ತಿಳಿಸಿರುವಂತೆ 58 ರಿಂದ 60 ವರ್ಷಗಳಿಗೆ ಹೆಚ್ಚಿಸಿರುವ ಸನ್ನಿವೇಶದಲ್ಲಿ ಸಾದಿಲ್ವಾರು ವೆಚ್ಚದಲ್ಲಿ ವೇತನ ಪಡೆಯುತ್ತಿರುವ ಪೂರ್ಣಕಾಲಿಕ ನೌಕರರ ನಿವೃತ್ತಿ ವಯಸ್ಸನ್ನು 58 ವರ್ಷದಿಂದ 60 ವರ್ಷದವರೆಗೆ ಹೆಚ್ಚಿಸಲು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ ಸಿಆಸುಇ 4 ಸೇನಿಸಿ 2010, ಬೆಂಗಳೂರು, ದಿನಾಂಕ: 11.08.2010**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ರಾಜ್ಯ ಸರ್ಕಾರದ ವಿವಿಧ ಇಲಾಖೆಗಳಲ್ಲಿ ಸಾದಿಲ್ವಾರು ವೆಚ್ಚದಿಂದ ವೇತನ ಪಡೆದು ಕಾರ್ಯನಿರ್ವಹಿಸುತ್ತಿರುವ ಪೂರ್ಣಕಾಲಿಕ ನೌಕರರ ನಿವೃತ್ತಿ ವಯಸ್ಸನ್ನು ತಕ್ಷಣದಿಂದ ಜಾರಿಗೆ ಬರುವಂತೆ 58 ರಿಂದ 60 ವರ್ಷಕ್ಕೆ ಹೆಚ್ಚಿಸಲಾಗಿದೆ.

2. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 257 ಸೇ–3/10 ದಿನಾಂಕ : 02–03–2010ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ಮಾರ್ಕಂಡೇಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ(ಸೇವಾ ನಿಯಮಗಳು–2)

ಪಿ.ಆರ್. ನಂ. 2259

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ** : ಚಿಕ್ಕಮಗಳೂರು ಜಿಲ್ಲೆಯಲ್ಲಿ ಕರ್ನಾಟಕ ಭೂ ಕಂದಾಯ ಕಾಯ್ದೆಯ ಕಲಂ-71ರನ್ವಯ ಘೋಷಿಸಿರುವ "ಮೀಸಲು ಅರಣ್ಯ" ಜಮೀನುಗಳ ಮೋಜಣಿ ತಂಡದ ಕಾಲಾವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ** :
1. ಆದೇಶ ಸಂಖ್ಯೆ ಅಪಜೀ 74 ಎಫ್‌ಎಎಫ್ 2007, ದಿನಾಂಕ : 01-02-2007.
2. ಸರ್ಕಾರಿ ಪತ್ರ ಸಂಖ್ಯೆ ಅಪಜೀ 57 ಎಫ್‌ಎಎಫ್ 2008, ದಿನಾಂಕ : 14-11-2008.
3. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿರವರ ಪತ್ರ ಸಂಖ್ಯೆ : ಪ್ರಮುಅಸಂ/ಮುಅಸಂ/ಕಾಯೋ/ಎ5/ಸಿಆರ್-5/2005-06, ದಿನಾಂಕ : 14-07-2009.

**ಪ್ರಸ್ತಾವನೆ:**

ಚಿಕ್ಕಮಗಳೂರು ಜಿಲ್ಲೆಯಲ್ಲಿ ಕರ್ನಾಟಕ ಭೂ ಕಂದಾಯ ಕಾಯ್ದೆ-1964 ಕಲಂ-71ರನ್ವಯ "ಮೀಸಲು ಅರಣ್ಯ" ಎಂದು ಘೋಷಿಸಿರುವ 136619.30 ಎಕರೆ ಸರ್ಕಾರಿ ಜಮೀನುಗಳನ್ನು ಸರ್ವೆ ಮಾಡಿ ಹದ್ದುಬಸ್ತು ಗುರುತಿಸಲು ಜಂಟಿ ಮೋಜಣಿ ತಂಡವನ್ನು ರಚಿಸಿ, ದಿನಾಂಕ : 30-12-2007 ರೊಳಗಾಗಿ ಮೇಲ್ಕಂಡ ಜಮೀನುಗಳ ಸರ್ವೆ ಮತ್ತು ಹದ್ದುಬಸ್ತು ಗುರುತಿಸುವ ಕೆಲಸವನ್ನು ಪೂರ್ಣಗೊಳಿಸಲು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 01-07-2007ರ ಆದೇಶದಲ್ಲಿ ಸೂಚಿಸಲಾಗಿತ್ತು.

ಸರ್ವೆ ಮತ್ತು ಹದ್ದುಬಸ್ತು ಗುರುತಿಸಲು ವಲಯ ಅರಣ್ಯಾಧಿಕಾರಿಗಳು, ಅರಣ್ಯ ಮೋಜಣಿದಾರರು, ನಕ್ಷೆದಾರರ ಸುಮಾರು 21 ಹುದ್ದೆಗಳು ಖಾಲಿ ಇದ್ದ ಕಾರಣ ಮೋಜಣಿ ಕಾರ್ಯವನ್ನು ನಿಗದಿತ ಕಾಲಾವಧಿಯಲ್ಲಿ ಗುರುತಿಸಿ ಪೂರ್ಣಗೊಳಿಸಲು ಸಾಧ್ಯವಾಗದ ಕಾರಣ, ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿರವರ ಕೋರಿಕೆಯಂತೆ ಜಂಟಿ ಮೋಜಣಿ ತಂಡದ ಕಾಲಾವಧಿಯನ್ನು ದಿನಾಂಕ : 31-05-2009 ರವರೆಗೆ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ : 14-11-2008ರ ಪತ್ರದಲ್ಲಿ ವಿಸ್ತರಿಸಲಾಗಿತ್ತು.

ಮಳೆಗಾಲ ಪ್ರಾರಂಭವಾದ ಕಾರಣ ಸರ್ವೆ ಕಾರ್ಯವನ್ನು ಸ್ಥಗಿತಗೊಳಿಸಲಾಗಿದ್ದು, ನಿಗಧಿತ ಸಿಬ್ಬಂದಿ ವರ್ಗದ ಅಲಭ್ಯತೆಯಿಂದಾಗಿ ಸರ್ವೆ ಕಾಮಗಾರಿಯನ್ನು ನಿರ್ವಹಿಸಲು ಸಾಧ್ಯವಾಗದ ಕಾರಣ ಮೇಲ್ಕಂಡ ಕೆಲಸವನ್ನು ಪೂರ್ಣಗೊಳಿಸಲು ದಿನಾಂಕ : 31-05-2010ರವರೆಗೆ ಕಾಲಾವಕಾಶವನ್ನು ವಿಸ್ತರಿಸಲು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ದಿನಾಂಕ : 14-07-2009ರ ಪತ್ರದಲ್ಲಿ ಕೋರಿರುತ್ತಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಚಿಕ್ಕಮಗಳೂರು ಜಿಲ್ಲೆಯಲ್ಲಿ ಮೀಸಲು ಅರಣ್ಯದ ಜಮೀನುಗಳ ಮೋಜಣಿ ಮತ್ತು ಹದ್ದಬಸ್ತು ಕಾರ್ಯಕ್ಕಾಗಿ ರಚಿಸಲಾಗಿರುವ ಜಂಟಿ ಮೋಜಣಿ ತಂಡದ ಅವಧಿಯನ್ನು ವಿಸ್ತರಿಸಲು ನಿರ್ಧರಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಅಪಜೀ 116 ಎಫ್‌ಎಎಫ್ 2009, ಬೆಂಗಳೂರು, ದಿನಾಂಕ: 08.01.2010**

ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ-71ರನ್ವಯ ಘೋಷಿಸಿರುವ "ಮೀಸಲು ಅರಣ್ಯ" ಜಮೀನುಗಳ ಸರ್ವೆ ಮಾಡಿ ಹದ್ದುಬಸ್ತು ಗುರುತಿಸುವ ಕಾರ್ಯಕ್ಕೆ ರಚಿಸಿರುವ ಜಂಟಿ ಮೋಜಣಿ ತಂಡದ ಅವಧಿಯನ್ನು ಮೇ 2010ರವರೆಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

ಪಿ.ಆರ್. ನಂ. 2260

## ಕಂದಾಯ ಸಚಿವಾಲಯ

**ವಿಷಯ** : ಶ್ರೀ ಎಂ.ಎನ್. ಮಂಜುನಾಥ್, ತಹಶೀಲ್ದಾರ್, ಗ್ರೇಡ್-2, ಪ್ರಸ್ತುತ ತಹಶೀಲ್ದಾರ್, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ** :
1. ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 110 ಎಎಸ್‌ಡಿ 2006, ದಿನಾಂಕ : 22-06-2006.
2. ಶ್ರೀ ಎಂ.ಎನ್. ಮಂಜುನಾಥ್, ತಹಶೀಲ್ದಾರ್ ಇವರ ಮನವಿ ದಿನಾಂಕ : 03-07-2006.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1), ದಿನಾಂಕ : 22-06-2006ರ ಅಧಿಸೂಚನೆಯಲ್ಲಿ, ಶ್ರೀ ಎಂ.ಎನ್. ಮಂಜುನಾಥ್, ಇವರು ಕಂದಾಯ ಇಲಾಖೆಯ ತಹಶೀಲ್ದಾರ್ ಗುಂಪು-ಬಿ ಹುದ್ದೆಗೆ ನೇಮಕಾತಿಗೊಂಡಿರುತ್ತಾರೆ. ಸದರಿಯವರು ಈ ಹುದ್ದೆಗೆ, ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ ಸಹ ಶಿಕ್ಷಕರಾಗಿ ದಿನಾಂಕ : 29-01-2004 ರಿಂದ 03-07-2006ರವರೆಗೆ ಸಲ್ಲಿಸಿದ ಸೇವೆಯನ್ನು ಪಿಂಚಣಿ ಮಂಜೂರಾತಿಗೆ ಪರಿಗಣಿಸಲು ಕೋರಿ ಮೇಲೆ ಓದಲಾದ ಕ್ರ.ಸಂ. (2)ರಲ್ಲಿ ಶ್ರೀಯುತರು ಕಂದಾಯ ಇಲಾಖೆಯಲ್ಲಿ ಸೇವೆ ಪ್ರಾರಂಭಿಸುವ ಪೂರ್ವದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಸಹಶಿಕ್ಷಕರಾಗಿ, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಕೋಲಾರ ಇವರ ಪತ್ರದ ಸಂ. ಸಿಪ್ರೌಶಿಸೇ/01/03-04, ದಿನಾಂಕ : 28-01-2004 ರಂತೆ ಪ್ರೌಢಶಾಲಾ ಸಹ ಶಿಕ್ಷಕರಾಗಿ ನೇಮಕಗೊಂಡು, ಸರ್ಕಾರಿ ನೂತನ ಪ್ರೌಢಶಾಲೆ, ಸೋಮೇಶ್ವರ ಪಾಳ್ಯ, ಮುಳಬಾಗಿಲು ಇಲ್ಲಿಗೆ ನೇಮಕವಾಗಿದ್ದು, ದಿನಾಂಕ : 29-01-2004ರ ಪೂರ್ವಾಹ್ನ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ತದನಂತರ ದಿನಾಂಕ : 03-07-2006 ರಂದು ಸಾರ್ವಜನಿಕ ಶಿಕ್ಷಣ ಇಲಾಖೆ, ಕೋಲಾರ ಇವರ ಬಿಡುಗಡೆ ಜ್ಞಾಪನಾ ಸಂ. ಸಿ-1777 ಪ್ರೌ.ಸ.ಶಿ.ಶ್ರೇ.ಬಿ.ಹು. 01/06-07, ದಿನಾಂಕ : 29-06-2006 ರನ್ವಯ ಶಿಕ್ಷಣ ಇಲಾಖೆಯಿಂದ ಬಿಡುಗಡೆ ಹೊಂದಿರುವುದಾಗಿ ಆದ್ದರಿಂದ ಶಿಕ್ಷಣ ಇಲಾಖೆಯಲ್ಲಿ ದಿನಾಂಕ : 29-01-2004 ರಿಂದ 03-07-2006 ರವರೆಗಿನ ಸೇವಾ ಅವಧಿಯನ್ನು ಪೂರೈಸಿದ್ದು, ಇವರ ಹಿಂದಿನ ಸೇವೆಯನ್ನು ಪರಿಗಣಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಶ್ರೀ ಎಂ.ಎನ್. ಮಂಜುನಾಥ್, ತಹಶೀಲ್ದಾರ್ ಇವರ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಶ್ರೀಯುತರ ಮೂಲ ಸೇವೆ ಪುಸ್ತಕದಲ್ಲಿ ದಾಖಲಿಸಿರುವಂತೆ ಶ್ರೀ ಎಂ.ಎನ್. ಮಂಜುನಾಥ್, ತಹಶೀಲ್ದಾರ್, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ ಇವರು ಈ ಹಿಂದೆ ಶಿಕ್ಷಣ ಇಲಾಖೆಯಲ್ಲಿ, ಸಹ ಶಿಕ್ಷಕರಾಗಿ ಸಲ್ಲಿಸಿದ್ದ ಸೇವೆ ದಿನಾಂಕ : 29–01–2004 ರಿಂದ 03–07–2006 ರವರೆಗಿನ ಸೇವಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 68 ಎಎಸ್‌ಡಿ 2007, ಬೆಂಗಳೂರು, ದಿನಾಂಕ : 16–08–2010**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಎಂ.ಎನ್. ಮಂಜುನಾಥ್, ತಹಶೀಲ್ದಾರ್, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ ಇವರು ಕಂದಾಯ ಇಲಾಖೆಯ ಸೇವೆಗೆ ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ ಸಹ ಶಿಕ್ಷಕರಾಗಿ ದಿನಾಂಕ : 29–01–2004 ರಿಂದ 03–07–2006 ರವರೆಗಿನ ಸಲ್ಲಿಸಲಾಗಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಅವರ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ 7) ರವರ ಟಿಪ್ಪಣಿ ಸಂಖ್ಯೆ : ಆಇ 291 ವೆಚ್ಚ–7/2008, ದಿನಾಂಕ : 15–05–2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ. 2261

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

**ವಿಷಯ** : ಶ್ರೀ ಹೆಚ್. ಕೃಷ್ಣಪ್ಪ, ನಿವೃತ್ತ ತಹಶೀಲ್ದಾರ್ ಇವರಿಗೆ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ** :

1. ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರ ಪತ್ರ ಸಂ : ಎಸಿಟಿ (1) ಸಿಆರ್ 124/09–10 ದಿನಾಂಕ : 31–05–2010.
2. ಮಹಾಲೇಖಪಾಲರು, ಬೆಂಗಳೂರು ಇವರ ಪತ್ರ ಸಂ : GEO1/09–10 R3/VOL 3301/916 ದಿನಾಂಕ : 11–11–2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಸಂ. (1), ದಿನಾಂಕ : 31–05–2010ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರು ಹೆಚ್. ಕೃಷ್ಣಪ್ಪ ನಿವೃತ್ತ ತಹಶೀಲ್ದಾರ್ ಇವರಿಗೆ ದಿನಾಂಕ : 01–04–2005 ರಿಂದ ಜಾರಿಗೆ ಬರುವಂತೆ ಒಟ್ಟು 3 ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ. ಈ ಬಗ್ಗೆ ಮಹಾಲೇಖಪಾಲರು ಮೇಲೆ ಓದಲಾದ ಕ್ರಸಂ. (2)ರ ದಿನಾಂಕ : 11–11–2009ರ ಪತ್ರದಲ್ಲಿ ಶ್ರೀ ಹೆಚ್. ಕೃಷ್ಣಪ್ಪ ರವರು ವೇತನ ಶ್ರೇಣಿ ರೂ. 6,000–11,200 ರಲ್ಲಿ ದಿನಾಂಕ : 01–04–2004 ರಂದು ಗರಿಷ್ಠ ವೇತನ ಮಿತಿ ತಲುಪಿರುತ್ತಾರೆಂದು, ಸದರಿಯವರು ದಿನಾಂಕ : 01–04–2005 ರಿಂದ ಮೊದಲನೇ ಸ್ಥಗಿತ ವೇತನ ಬಡ್ತಿಗೆ, ದಿನಾಂಕ : 01–04–2006 ರಿಂದ ಎರಡನೇ ಸ್ಥಗಿತ ವೇತನ ಬಡ್ತಿಗೆ, ದಿನಾಂಕ : 01–04–2007 ರಿಂದ ಮೂರನೇ ಸ್ಥಗಿತ ಬಡ್ತಿಗೆ ಅರ್ಹರಿರುವುದಾಗಿ ವರದಿ ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 465 ಎಎಸ್‌ಡಿ 2010, ಬೆಂಗಳೂರು, ದಿನಾಂಕ : 16–08–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಹೆಚ್. ಕೃಷ್ಣಪ್ಪ, ನಿವೃತ್ತ ತಹಶೀಲ್ದಾರ್ ಇವರಿಗೆ ದಿನಾಂಕ : 01–04–2005 ರಿಂದ ಜಾರಿಗೆ ಬರುವಂತೆ ಈ ಕೆಳಕಂಡಂತೆ ಒಟ್ಟು 3 ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಿ ಆದೇಶಿಸಿದೆ.

1. ದಿನಾಂಕ : 01–04–2005 ರಿಂದ ಮೊದಲನೇ – ಸ್ಥಗಿತ ವೇತನ ಬಡ್ತಿ – (ವೇತನ ಶ್ರೇಣಿ – ರೂ. 6000–11,200)
2. ದಿನಾಂಕ : 01–04–2006 ರಿಂದ ಎರಡನೇ – ಸ್ಥಗಿತ ವೇತನ ಬಡ್ತಿ – (ವೇತನ ಶ್ರೇಣಿ – ರೂ. 11,400–21,600)
3. ದಿನಾಂಕ : 01–04–2007 ರಿಂದ ಮೂರನೇ – ಸ್ಥಗಿತ ವೇತನ ಬಡ್ತಿ – (ವೇತನ ಶ್ರೇಣಿ – ರೂ. 11,400–21,600)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ. 2262

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ** : ಧಾರವಾಡ ಜಿಲ್ಲೆಯ ಕೋಳಿವಾಡದಲ್ಲಿ ಕುಮಾರವ್ಯಾಸ ರವರ ಹೆಸರಿನಲ್ಲಿ ಸ್ಮಾರಕ ನಿರ್ಮಾಣ ಮಾಡುವ ಕುರಿತು.

**ಓದಲಾಗಿದೆ** : ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ಇವರ ಪತ್ರ ಸಂಖ್ಯೆ : ಸನಿಧಾ/ಕಸಂಇ/ಸ್ಮಾಬ/282/2010-11, ದಿನಾಂಕ : 19-06-2010.

**ಪ್ರಸ್ತಾವನೆ :**

2010-11ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಕುಮಾರವ್ಯಾಸನ ಜನ್ಮ ಸ್ಥಳವಾದ ಕೋಳಿವಾಡದಲ್ಲಿ ಸ್ಮಾರಕವನ್ನು ನಿರ್ಮಿಸಲು ರೂ. 1.00 ಕೋಟಿಗಳನ್ನು ನೀಡುವುದಾಗಿ ಮಾನ್ಯ ಮುಖ್ಯಮಂತ್ರಿಯವರು ಘೋಷಣೆ ಮಾಡಿರುತ್ತಾರೆ.

ಮೇಲೆ ಓದಲಾದ ಪತ್ರದಲ್ಲಿ ಧಾರವಾಡ ಜಿಲ್ಲೆಯ, ಹುಬ್ಬಳ್ಳಿ, ತಾಲ್ಲೂಕಿನ ಕೋಳಿವಾಡದಲ್ಲಿ ಜನಿಸಿದ ಕುಮಾರವ್ಯಾಸನ ಸ್ಮಾರಕ ನಿರ್ಮಾಣಕ್ಕೆ ರೂ. 1.00 ಕೋಟಿ ಮೊತ್ತದ ಅಂದಾಜು ಪಟ್ಟಿ ಮತ್ತು ನೀಲಿ ನಕ್ಷೆ ಸಲ್ಲಿಸಿರುವ ಪ್ರಸ್ತಾವನೆಗೆ ಆಡಳಿತಾತ್ಮಕ ಅನುಮೋದನೆ ನೀಡಿ, ರೂ. 1.00 ಕೋಟಿ ಅನುದಾನ ಬಿಡುಗಡೆ ಮಾಡುವಂತೆ ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ರವರು ಕೋರಿರುತ್ತಾರೆ.

ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ರೂ. 1.00 ಕೋಟಿ ಮೊತ್ತದ ಅಂದಾಜು ಪಟ್ಟಿ ಮತ್ತು ನೀಲಿ ನಕ್ಷೆಯನ್ನು ಆರ್ಥಿಕ ಇಲಾಖೆ ಹಾಗೂ ಯೋಜನಾ ಇಲಾಖೆಗೆ ಕಳುಹಿಸಿ, ಪ್ರಸ್ತಾವನೆಗೆ ಅನುದಾನ ಬಿಡುಗಡೆ ಕುರಿತು ಅನುಮೋದನೆ ಪಡೆಯಲಾಯಿತು. ಸದರಿ ಯೋಜನೆಯನ್ನು ಕಾರ್ಯಾನುಷ್ಠಾನಗೊಳಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 36 ಸ್ಮಾಪ್ರನಿ 2010, ಬೆಂಗಳೂರು, ದಿನಾಂಕ : 24-08-2010**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಧಾರವಾಡ ಜಿಲ್ಲೆಯ ಕೋಳಿವಾಡದಲ್ಲಿ ಕುಮಾರವ್ಯಾಸ ರವರ ಹೆಸರಿನಲ್ಲಿ ಸ್ಮಾರಕ ನಿರ್ಮಾಣ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ರೂ. 1.00 ಕೋಟಿಗಳನ್ನು ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ, ಧಾರವಾಡ ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಸರ್ಕಾರದ ಮಂಜೂರಾತಿ ನೀಡಲಾಗಿದೆ.

**ಷರತ್ತುಗಳು :**

1. ಕಾಮಗಾರಿಯನ್ನು ಟೆಂಡರ್ ಕರೆದು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ಹಾಗೂ ಅದರ ನಿಯಮಗಳು 2000 ರಂತೆ ಕ್ರಮ ಕೈಗೊಳ್ಳತಕ್ಕದ್ದು.
2. ಕಾಮಗಾರಿಯನ್ನು ಪೂರ್ಣಗೊಳಿಸಲು ಸಮಯ ನಿಗಧಿ ಪಡಿಸಿಕೊಂಡು ಆ ಸಮಯದೊಳಗೆ ಪೂರ್ಣಗೊಳಿಸುವುದು. ಕಾಮಗಾರಿಯ ಪ್ರಗತಿ ಆಧರಿಸಿ ಹಂತ ಹಂತವಾಗಿ ಹಣ ಬಿಡುಗಡೆ ಮಾಡುವುದು.
3. ಕಾಮಗಾರಿಯನ್ನು ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ಇವರ ಮೇಲುಸ್ತುವಾರಿಯಲ್ಲಿ ಕೈಗೊಳ್ಳುವುದು.
4. ಕಾಮಗಾರಿಯ ಅಂದಾಜು ಪಟ್ಟಿಯನ್ನು ರೂ. 1.00 ಕೋಟಿಗಳಿಗೆ ನಿಗಧಿಪಡಿಸಿಕೊಳ್ಳುವುದು.
5. ಕಾಮಗಾರಿಗೆ ಅನುದಾನ ಉಪಯೋಗಿಸಿದ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರ ಸಲ್ಲಿಸುವುದು.

ಈ ಅನುದಾನವನ್ನು 2010-11ನೇ ಸಾಲಿನ ಲೆಕ್ಕ ಶೀರ್ಷಿಕೆ 2205-00-102-4-31-059 (ಯೋಜನೆ) ಇದರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ : 26-07-2010ರ ಟಿಪ್ಪಣಿ ಸಂಖ್ಯೆ : ಆಇ 513 ವೆಚ್ಚ-7 2010 ರಲ್ಲಿ ಆರ್ಥಿಕ ಇಲಾಖೆಯ ಸಹಮತಿ ಹಾಗೂ ದಿನಾಂಕ : 22-07-2010 ರ ಟಿಪ್ಪಣಿ ಸಂಖ್ಯೆ : ಯೋಇ 83 ಜಶ 2010ರಲ್ಲಿ ಯೋಜನಾ ಇಲಾಖೆಯ ಸಹಮತಿಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ. 2263

**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

## ವಸತಿ ಸಚಿವಾಲಯ

**ವಿಷಯ** : ಹುಬ್ಬಳ್ಳಿಯ ಜೈ ಹನುಮಾನ್ ನಗರದ ಗುಡಿಸಲುವಾಸಿಗಳಿಗೆ ವಾಜಪೇಯಿ ನಗರ ವಸತಿ ಯೋಜನೆಯಡಿ ಮನೆಗಳನ್ನು ನಿರ್ಮಿಸುವ ಬಗ್ಗೆ.

**ಓದಲಾಗಿದೆ** :
1. ಧಾರವಾಡ ಜಿಲ್ಲಾಧಿಕಾರಿಯವರ ಅರೆ ಸರ್ಕಾರಿ ಪತ್ರ ಸಂಖ್ಯೆ : UD CELL/Ashraya/CR/2010-11, ದಿನಾಂಕ : 08-07-2010.
2. ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ ಇವರ ಪತ್ರ ಸಂ. ಎಂಡಿಆರ್‌ಜಿಆರ್‌ಹೆಚ್‌ಸಿಎಲ್ 01 ವಿಹೆಚ್‌ಎಸ್ 06 2010, ದಿನಾಂಕ : 11-08-2010.
3. ಸರ್ಕಾರದ ಆದೇಶ ಸಂ. ವಇ 06 ಹೆಚ್‌ಎಹೆಚ್, ದಿನಾಂಕ : 13-04-2010.
4. ದಿನಾಂಕ : 06-07-2010 ರಂದು ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಅಧ್ಯಕ್ಷತೆಯಲ್ಲಿ ವಿವಿಧ ವಸತಿ ಯೋಜನೆಗಳ ಪ್ರಗತಿ ಪರಿಶೀಲನೆ ಕುರಿತು ನಡೆದ ವಿಡಿಯೋ ಕಾನ್ಫರೆನ್ಸ್ ಸಭೆಯ ನಡವಳಿಗಳು.

